# ದೇವರ ಹೊಲ

## ಸಾಮಾಜಿಕ ನಾಟಕ

ಲಿಂಗಸುಗೂರು ವಿಠ್ಠಲರಾಯರು

ಮಾರಾಟಗಾರರು
**ಕರ್ನಾಟಕ ಬುಕ್ ಡಿಪೋ**
ಇಸಾಮಿಯಾ ಬಾಜಾರ್
ಹೈದರಾಬಾದ್

# ಮುನ್ನುಡಿ

'ದೇವರ ಹೊಲ' ಒಂದು ಸಾಮಾಜಿಕ ನಾಟಕ. ಹರಿಜನ ಸಮಸ್ಯೆಗೆ ಸಂಬಂಧಿಸಿದಂತೆ ಕಾಣುತ್ತಿದ್ದರೂ ನಿಜವಾಗಿಯೂ ಮಹಾಜನ ಸಮಸ್ಯೆಗೆ ಸಂಬಂಧಿಸಿದ್ದು. ಸಂಪ್ರದಾಯ ಶರಣನಾದ ಕೃಷ್ಣರಾಯ. ಅವನಿಗೆ ಅಧಿಕಾರ ಪ್ರಿಯತೆ; ಹೊಸತು ಎಂದರೆ ಅಸಹನೆ. ಅವನ ಅಳಿಯ ಶ್ರೀನಿವಾಸರಾಯ ತರುಣ ಸುಧಾರಕ. ಎಲ್ಲಾ ಸುಧಾರಕ ತರುಣರಿಗೆ ಇರುವಂತೆಯೇ ಅವನಿಗೂ ಹಳತು, ಅಧಿಕಾರ ಕಂಡರೆ ಬೇಸರ, ಅಸಹನೆ. ಇವರಿಬ್ಬರ ಹುರುಪುಗಳ ತಾಕಲಾಟಕ್ಕೆ ಹರಿಜನ ಸಮಸ್ಯೆ ಒಂದು ಕ್ಷೇತ್ರವಾಗಿ ಸಿಕ್ಕಿತು. ಕವಡುಗಾಣದ ಚೆನ್ನ ತನ್ನ ಭೋಳೇತನದಿಂದಲೇ ತನಗೂ ಪರರಿಗೂ ಸಮಸ್ಯೆಯಾಗುತ್ತಾನೆ. ಊರೊಳಗಿನ ಜನ ಈ ರುದ್ರನಾಟಕಕ್ಕೆ ನೆರವಾಗಿ ನಿಲ್ಲುತ್ತಾರೆ.

ಕೃಷ್ಣರಾಯರು ತಮ್ಮ ಅಳಿಯ ಶ್ರೀನಿವಾಸರಾಯನ ಶಿಷ್ಯ ಹೊಲೆಯ ಚೆನ್ನನ ಹೊಲವನ್ನು ಅವನಿಗೆ ಸಾಲ ಕೊಟ್ಟು ಖರೀದಿ ಮಾಡಿ, ಅದನ್ನು ತನ್ನ ಒಬ್ಬಳೇ ಮಗಳು—ಶ್ರೀನಿವಾಸನ ಹೆಂಡತಿ—ಕುಸುಮಾ ಹೆಸರಿಗೆ ಬರೆಯಿಸಿ, ಅವಳಿಂದ ದೇವರಿಗೆ ದಾನಮಾಡಿಸುತ್ತಾರೆ. ಅದು 'ದೇವರ ಹೊಲ'. ದೇವಾಲಯಪ್ರವೇಶಕ್ಕೆ ಚೆನ್ನ ಮುಂದಾಳಾಗಿ ನಿಂತನಲ್ಲ ಎಂದು ಕೃಷ್ಣರಾಯರಿಗೆ ಅವನ ಮೇಲೆ ಸಿಟ್ಟು. ಅದಕ್ಕೆಂದೇ ಅವರ ಅಳಿಯನಿಗೆ ಅಭಿಮಾನ. ಇದು ಅವಿಶ್ವಾಸ ಸಂಶಯಗಳಿಗೆ ಬೀಜ. ಇದರಿಂದ ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳದೆ ದುಃಖಕ್ಕೆ ಈಡಾಗುತ್ತಾರೆ. ಕೃಷ್ಣರಾಯರ ಹೆಂಡತಿ, ವೆಂಕಪ್ಪಾಚಾರ್ಯರು ಸಾಮರಸ್ಯಕ್ಕೆ ತರಲು ಪ್ರಯತ್ನಿಸಿದರೂ ಈ ಹೊಲದಲ್ಲಿ ಗರಿಕೆ ಎಲ್ಲಿ ಬೇರು ಬಿಟ್ಟಿದೆಯೋ ತಿಳಿಯಲಾರದೆ ವಿಫಲರಾಗುತ್ತಾರೆ.

ಹೀಗಿದೆ ಈ ದೇವರ ಹೊಲ. ಈ ಲೋಕವೇ ದೇವರ ಹೊಲ. ಈ ತೊಡಕು ಒಂದಲ್ಲೊಂದು ಬಗೆಯಲ್ಲಿ ನಾವು ನಿತ್ಯವೂ ಅನುಭವಿಸುತ್ತಿರುವ ಅನರ್ಥ ಕಲ್ಲೋಲ. ಅಂತೇ ಈ ಹೆಸರು ಬಹಳ ಒಪ್ಪುವಂತಿದೆ.

ದೇವರ ಹೊಲವನ್ನು ಹರಗಿ ಸುಳಿಸಲು ನಮಗೆ ಇರುವ ಅಡ್ಡಿ ನಮ್ಮ ಸೌಜನ್ಯ ಲೋಪವಲ್ಲ- ಅಸಹನೆ, ಅನುಮಾನ. ಇಲ್ಲಿ ಬರುವ ಪಾತ್ರಗಳೆಲ್ಲ ಸಾಮಾನ್ಯ ಸಜ್ಜನರೇ. ಯಾರೂ ಕೆಟ್ಟವರಲ್ಲ. ಪರಾರ್ಥವಾಗಿ ದುಡಿಯ ಬಯಸುವವರೇ. ಅದರಲ್ಲೂ ಅಸಹನೆ, ಸಂಕೋಚ ತುಂಬಿಕೊಂಡು ಈ ಗೊಂದಲ. ತನ್ನ ಪ್ರಾಣಕ್ಕೇ ಸಂಚಕಾರವಾದರೂ ತನ್ನ ಒಡತಿಯನ್ನು ಬದುಕಿಸಲು ಮಂತ್ರ ಹಾಕುವ ಚೆನ್ನನಿಗೆ ತನ್ನ ವ್ಯವಹಾರದಲ್ಲಿ ಮಾವ-ಅಳಿಯಂದಿರ ಬೆಸುಗೆ ಬಿಡಿಸಬಾರದೆಂಬುದು ತಿಳಿಯಲಿಲ್ಲ. ಅಳಿಯನಿಗಾಗಿಯೇ ಎಲ್ಲವನ್ನೂ ಮಾಡುವ ಕೃಷ್ಣರಾಯನಿಗೆ ಅಳಿಯನ ಮನಸ್ಸನ್ನು ಅರಿತುಕೊಳ್ಳುವ ಸಹನೆಯನ್ನು ದೇವರು ಕೊಡಲಿಲ್ಲ. ಹರಿಜನ ಪಕ್ಷಪಾತವನ್ನು ತೋರುವ ಮಾತಿನಲ್ಲಿ ತನ್ನ

ಹಿತವನ್ನೇ ಕೋರುವ ಮಾವನ ನಿಲುವನ್ನು ಅರ್ಥಮಾಡಿಕೊಳ್ಳುವ ಅಗತ್ಯ ಶ್ರೀನಿವಾಸ ರಾಯನಿಗೆ ಕಾಣಲಿಲ್ಲ. ಇದರಿಂದ ಅಳಿಯನ ಕಾಯಿಯೂ ಸತ್ತಿತು. ಮಾವನ ಕಾಯಿಯೂ ಸತ್ತಿತು. ಆಟ ಬಯಲಾಯಿತು. ಇದು ದೇವರ ಹೊಲದ ವಿಧಿವಿಲಾಸ.

ಇಂಥ ಚಮತ್ಕಾರವಾದ ನಾಟಕವನ್ನು ಬರೆದು ಮಾನವ ಸ್ವಭಾವದ ಪರಿಚಯವನ್ನು ವಿಲಕ್ಷಣವಾಗಿ ಮಾಡಿಕೊಟ್ಟದ್ದಕ್ಕಾಗಿ ಶ್ರೀ ಲಿಂಗಸುಗೂರ ವಿಠ್ಠಲರಾಯರನ್ನು ಅಭಿನಂದಿಸಬೇಕು. ಶ್ರೀಯುತರು ಹೈದರಾಬಾದಿನ ಕನ್ನಡ ಬರೆಹಗಾರರಲ್ಲಿ, ಕಾರ್ಯಕರ್ತರಲ್ಲಿ ಹೆಸರಾದವರು. ಒಳ್ಳೇ ವ್ಯವಹಾರಜ್ಞರು. ಮಾರ್ಮಿಕವಾಗಿ ಬರೆಯಬಲ್ಲರು. ಹೈದರಾಬಾದ್ ಆಕಾಶವಾಣಿಗೆ ಹಲವಾರು ರಸಪೂರ್ಣ ರೂಪಕಗಳನ್ನು ಬರೆದಿದ್ದಾರೆ. 'ಲೈಲಾ ಪತ್ರಗಳು' ಎಂಬ ಉರ್ದು ಗ್ರಂಥದ ಅನುವಾದವನ್ನು ಆಗಲೇ ಕನ್ನಡಿಗರಿಗೆ ಕೊಟ್ಟಿದಾರೆ. 'ಹೈದರಾಬಾದ್ ಕರ್ಣಾಟಕ' ಎಂಬ ಪರಿಚಯಗ್ರಂಥವನ್ನು ಬರೆದಿದ್ದಾರೆ. ಹೈದರಾಬಾದಿನ ಕನ್ನಡಿಗರ ಕಾರ್ಯಕ್ಷೇತ್ರಗಳಲ್ಲಿ ಅವರ ಶಿಸ್ತು, ವ್ಯವಸ್ಥಾಪಕ ಶಕ್ತಿ, ದುಡಿತದ ಹುಮ್ಮಸ್ಸು ಎಲ್ಲರಿಗೂ ಗೊತ್ತಿದೆ. ಅವರ ಲೇಖನಶಕ್ತಿ ಕನ್ನಡ ಜನಕ್ಕೆ ಗೊತ್ತಾಗಲು ಅವಕಾಶವಾಗುವಂತೆ ಅವರ ಕರ್ತೃತ್ವಶಕ್ತಿಯ ಪರಿಚಯವಾಗಲು ಕನ್ನಡನಾಡು ಹಂಚಿ ಹೋಗಿರುವುದು ಅಡ್ಡಿಯಾಗಿದೆ. ಇಂಥ ಹಲವಾರು ಜನ ಹೈದರಾಬಾದಿನ ಕನ್ನಡ ಕೆಲಸಗಾರರಿಗೆ ಕನ್ನಡದ ಈ ಹೊಲ ಎಂದು ಸಿಕ್ಕೀತೋ? ನಡುವೆಯೇ ಹಾವು ಕಚ್ಚೀತೋ? ದೇವರೆ ಬಲ್ಲ.

೧೬—೩—೫೦ ಸಿದ್ದವನಹಳ್ಳಿ ಕೃಷ್ಣಶರ್ಮ.

---

## ಪಾತ್ರಗಳು

೧. ಕೃಷ್ಣರಾಯರು : ೪೫ ವರ್ಷ ವಯಸ್ಸು. ಸಾವುಕಾರರು, ವ್ಯಾಪಾರಿಗಳು.
೨. ರಾಧಾಬಾಯಿ : ಕೃಷ್ಣರಾಯರ ಪತ್ನಿ.
೩. ಸುಮಿತ್ರಾ : ಇವರ ಮಗಳು. ವಯಸ್ಸು ೧೫.
೪. ಶ್ರೀನಿವಾಸ : ರಾಧಾಬಾಯಿಯ ಅಣ್ಣನ ಮಗ, ಸುಮಿತ್ರೆಯ ಪತಿ.
೫. ವೆಂಕಪ್ಪಾಚಾರ್ಯರು : ಸುಶೀಲರಾದ ಆಚಾರ್ಯರು. ಸಂಸ್ಕೃತ ಪಂಡಿತರು,
೬. ಡಾ. ನೀಲಕಂಠರಾವ್ : ಶ್ರೀನಿವಾಸನ ತಾಯಿಯ ತಮ್ಮ. ಆಯುರ್ವೇದ್–ಹೋಮಿಯೋಪಥಿಕ್ ಡಾಕ್ಟರು.
೭. ಸದಾಶಿವಯ್ಯ : ಶ್ರೀನಿವಾಸನ ಸ್ನೇಹಿತ, ಹರಿಜನಶಾಲೆಯ ಶಿಕ್ಷಕ.
೮. ಚೆನ್ನಪ್ಪ : ರಾಮಪೂರದ ಚೀಗಾರ. ಕೃಷ್ಣರಾಯರ ರೈತ, ವಯಸ್ಸು ೫೦.
೯. ರಾಮಣ್ಣ : ಕೃಷ್ಣರಾಯರ ಗುಮಾಸ್ತ, ವಯಸ್ಸು ೪೦.

# ದೇವರ ಹೊಲ

( ರಾಮಪುರದ ಊರಹೊರಗಿನ ಬೀದಿ. ಚೆನ್ನಪ್ಪ, ಶ್ರೀನಿವಾಸ ಹಾಗು ಸದಾಶಿವಯ್ಯ ಪ್ರವೇಶಿಸುವರು )

ಚೆನ್ನಪ್ಪ—ಎಪ್ಪಾ! ಇದೇ ನೋಡರಿ, ಎಡಗಡೆ ಐತಲ್ಲಾ ಈ ಬೈಲು. ಇಲ್ಲೇ ಸಾಲಿ ಕಟ್ಟಿಸಬೇಕೂ ಅಂತಾರ ಮಾಸ್ತರು. ಊರಮುಂದೆ ಅನುಮಪ್ಪನಗುಡಿ ಕಟ್ಟಿದಾಂಗ.

ಸದಾಶಿವಯ್ಯ—ಊರಹೊರಗ ಕಟ್ಟಿಡ ಆದರನ್ನ ಸಾಲೀಗೆ ಅನುಕೂಲ. ಸಾಲೀಮುಂದೇ ಹುಡುಗರಿಗೆ ಆಡಲಿಕ್ಕೆ ಬೈಲನ್ನೂ ಮಾಡಿಕೊಳ್ಳ ಬಹುದು. ಊರೊಳಗ ಈಗ ಸಾಲಿ ಇರುವ ಮನೆಯನ್ನಂತೂ ನೀವು ನೋಡಿಯೇ ಇದ್ದೀರಿ. ಅದೂ ಈಗ ಹುಡುಗರಿಗೆ ಸಾಕಾಗವಲ್ಲದು. ಮತ್ತೆ ಊರೊಳಗ ಬೇರೆ ಮನೆಗಳೂ ಇಲ್ಲ. ಸದ್ಯಕ್ಕೆ ಈಗಿರುವ ಮನೆಯಮುಂದೆ ಚಪ್ಪರಹಾಕಿಕೊಂಡೇ ಸಾಗಿಸಬೇಕಾಗಬಹುದು.

ಶ್ರೀನಿವಾಸ—ಒಂದು ವರ್ಷದೊಳಗೆಯೆ ರಾಮಪುರದ ಈ ಹರಿಜನರ ಶಾಲೆಗೆ ಇಷ್ಟು ಹುಡುಗರು ಬಂದಾರು ಅಂತ ನನಗ ಅನಿಸಿರಲಿಲ್ಲಿ. ಮತ್ತ ಅಭ್ಯಾಸವೂ ನೆಟ್ಟಗನ್ನ ನಡದ್ದಾಂಗ ಅದ.

ಚೆನ್ನಪ್ಪ—ಇದೆಲ್ಲ ಮಾಸ್ತರದನ್ನ ಕಟಪಿಟ ನೋಡೆಪ್ಪ. ಉಡುಗರನ್ನ ಅಂದರ ಮಳ್ಳನ್ನಮಾಡತಾರ. ಬೆಲ್ಲಕ್ಕ ಇರುವು ಮುಕ್ಕಿರದಾಂಗ ಮುಕ್ಕರತಾವ ಉಡುಗರು ಮಾಸ್ತರನ್ನ ಕಂಡರ. ನಮ್ಮೂರ ಉಡುಗ ರಂತೂ ಸೈ, ಸುತ್ತ ಎರಡಮೂರ ಅಳ್ಳಿ ಉಡುಗರು ಬರಾಕ ಅತ್ಯಾವ. ಮತ್ತ ಅದಕ ನಮ್ಮ ಸಾಲಿ ಆ ಸರಕಾರಿ ಸಾಲೀಗಿಂತ ಬಲಾ ಆಗೈತಿ. ಇದಕೊಂದು ಈಟುಬ್ಯಾಡೆ ಬಂಗ್ಲೇವು ಆಗಿಬಿಟ್ರು ಅಂದರ ನೋಡ್ರೆಪ್ಪ ಊರಮುಂದೆಲ್ಲ ಬಳ್ಳ ಕಚ್ಚಿಕೊಂಬಂಗ ಆಗ್ತೈತೆ.

ಶ್ರೀನಿವಾಸ—ಆದರ ನನ್ನ ಉದ್ದೇಶ ಬೇರೆ. ಹರಿಜನರೆಲ್ಲರಿಗೂ ಅದೇ ಸರಕಾರಿ ಶಾಲೆಯಲ್ಲಿಯೇ ಪ್ರವೇಶ ಸಿಗಬೇಕು. ಎರಡೂ ಒಂದೇ ಆಗಬೇಕು ಅಂತ ನನ್ನ ಇಚ್ಛೆ.

ಚೆನ್ನಪ್ಪ—ಎಪ್ಪಾ! ನಿನ್ನಮಾತs ಇಂಗ ಬಿಡು. ಅಲ್ಲ ಅದೇನs ಅಂತಾರಲ್ಲ. ಊರಾಗಿರಬ್ಯಾಡಾ ಅಂದರ ಸುಣ್ಣ ಅಚ್ಚಿದ ಮನಿಬೇಡಿದರಂತ. ಈ ನಮ್ಮ ಸಾಲಿ ಬ್ಯಾರೇ ತಗದs ಊರಮುಂದಿ ಸಂಗಡ ಕರಿಮಾರಿ ಕಟಗೊಂಡಿ. ಕಿಟ್ಟಪ್ಪ ದಣಿಯಂತೂ ಪೂರಾ ಕೈಬಿಟ್ಟಂಗ ಆಗೈತೆ. ಈಗ ಬ್ಯಾಡೆಪ್ಪ. ನಮ್ಮ ಸಾಲಿ ಬ್ಯಾರೆಯಾಕ ಇರೋಲ್ದು. ಈ ತಿಂಗಳಾ ನನಗ ನಿನಗ ಬಲಾಚಾರ ನೆಟ್ಟಗಿಲ್ಲಂತ. ಮೊನ್ನೆ ಉಗಾದಿ ದಿನ ದೋಸೇರು ಏಳ್ಯಾರ. “ಬಲ ಇಲ್ಲದಾಗ ನೆಲಾ ಎದ್ದ ಬಡೀತು” ಅನ್ನಾಂಗ ಆದೀತು. ಈ ಬ್ಯಾಸಿಗಿ ಓಗಲಿ. ನಿನಗೂ ಈಟು ಎಲ್ಯಾರ ಕೆಲಸಾ ಸಿಗಲಿ. ಎಲ್ಲಾ ಪಾಡ ಆದ ಮ್ಯಾಗ ನೋಡಾಮಂತ.

ಸದಾಶಿವಯ್ಯ—ಶ್ರೀನಿವಾಸರಾಯ, ಈಗ ಕೃಷ್ಣರಾಯರ ಸಿಟ್ಟು ನನ್ನ ಮ್ಯಾಲ ಮತ್ತು ಚೆನ್ನಪ್ಪನಮ್ಯಾಲ. ಅದರಾಗ ನೀವು ಈ ಸಾರೆ ಹೋದ ಮ್ಯಾಲ ಹೆಚ್ಚೇ ಆಗೇದ. ನನ್ನದೇನು ಹ್ಯಾಂಗಾದರೂ ಆದೀತು. ಅದರ ಈ ಸಾರೆ ಚೆನ್ನಪ್ಪಗ ನಿಮ್ಮ ಹೊಲಾ ಕೌಲಿಗೆ ಕೊಡೋದಿಲ್ಲಂತ. ಮತ್ತೆ ದೇವರಹೊಲಾ ದೇವರಹೊಲಾ ಅಂತ ಅನ್ನೊ ಅವನ ಹೊಲಾನೂ ಅವನಿಗೆ ಕೊಡೋದಿಲ್ಲಂತ.

ಶ್ರೀನಿವಾಸ—ಹಾಂ! ನಾನು ಎಲ್ಲಾ ಸರಿಪಡಿಸಿ ಹೋಗಿದ್ದೆನಲ್ಲ ನಮ್ಮ ಹೊಲದ ಸಂಬಂಧ. ಈಗ ಮತ್ತೆ ಕಾರಣ ಏನು ತೋರಸತಾರ?

ಚೆನ್ನಪ್ಪ—(ಸಣ್ಣಮೋರೆಮಾಡಿ) ಕಾರಣ ಏನು ಎಪ್ಪಾ! ಎಲ್ಲಾದಕ್ಕೂ ನಂಬಿಕೀನೆ ಕಾರಣ. ಈಗ ೨೫ ವರ್ಷದಿಂದ ನಿಮ್ಮ ಯಜಮಾನರ ಕಾಲದ ಸೊಂಟು ಈ ಒಲಾ ಮಾಡಿಕೊಂತ ಬಂದೀನಿ. ಇಷ್ಟದಿನಾ ನಾ ಒಲಾ ಮಾಡಿದರೂ ನಾ ಏನ ಕಾಗದಪತ್ರ ಸೈತ ಬರಕೊಟ್ಟಿಲ್ಲ. ಈ ಒಲಾನ ಎಪ್ಪಾ! ಮುದಲ ಒಡ್ಡರ ದುರಗ ಮಾಡತಿದ್ದ. ನೀನಿನ್ನ

ಉಟ್ಟಿದ್ದಿಲ್ಲ. ಅವ್ವ ದಿಮ್ಮುಸಿಸೇಳಿದ್ದಳು. ನಾನು ಚಾಕರೀಗೆಂತ ಓಗಿದ್ದೆ. ಮಕ್ಕಳs ದಕ್ಕತಿದ್ದಿಲ್ಲ. ಅಂತ್ರ ಕಟ್ಟೆಂಪಳು. ಅಂತ್ರ ಕಟ್ಟೆ ಗಣಮುಗ ಉಟ್ಟತಾನ, ಕಾಳಜಿ ಮಾಡಬ್ಯಾಡ ಅಂತ ಏಳಿಬಂದೆ. ಮುಂದ ಆರತಿಂಗಳಿಗೆ ಎಪ್ಪಾ! ನೀನು ಉಟ್ಟೆ. ತೊಟ್ಲಾಗ ಆಕಿ ದ್ದಿವಸನs ನನಗ ಕರದು ಒಲಾ ಕೊಟ್ಟೆ ನಿಮ್ಮ ಯಜಮಾನ. ಕಾಗದ ಬರಕೊಡತೀನಿ ಅಂದ್ರ, " ಆದ್ಯಾಕೊ ಚೆನ್ನ ಕಾಗದ ಯಾಕ ಅಂದ." " ಮನಿಸ್ಯಾ ಏನ ಕಳಕೊಂಡರ ಕಳಕೊಳ್ಳಿ ನೆಂಬಿಕಿ ಕಳಕೋ ಬಾರದು. ಅಗು ಓದವ್ಯಾಗ ಎವಾರ ಮಾಡಬಾರದು " ಅಂತ ಏಳಿದ್ನೆಪ್ಪಾ-ಆತ ನಮ್ಮನ್ನ ಬಿಟ್ಟೆಓದ. ಆದರ ಆತನ ಕಿರಿಯೇವು ತಪ್ಪಿಸೇನೇನು ನಾನು. ಆತನ ತರುವಾಯ ಕಿಟ್ಟೆಪ್ಪ ದಣೀನ್ ನಂಬೀನಿ ಆತಗ ಈಗ ನನ್ನವ್ಯಾಗ ನೆಂಬಿಕಿ ಇಲ್ದಾಂಗ ಆಗೇತಿ. ಎಪ್ಪಾ ಒಲಾ ನಿಮ್ಮದು. ಮತ್ತೆ ಅಂದವ್ಯಾಗ ಕಾರಣ ಏನಾರ ಏಳಬೋದು.

ಸದಾಶಿವಯ್ಯ—ನಿಮ್ಮ ಹೊಲದ ಮ್ಯಾತಂತೂ ಸರಿ. ನನಗೆ ಅದರ ವಿಷಯ ಅಷ್ಟು ಕಾಳಜಿ ಇಲ್ಲ. ನೀವು ದೊಡ್ಡವರಾಗೀರಿ. ನಿಮ್ಮ ಒಪ್ಪಿಗಿ ಪಡೆದಾದರೂ ಆ ಹೊಲಾ ಮಾಡಿಕೊಳ್ಳಬಹುದು, ಅನ್ನಿರಿ ಆದರ, ಅವನ ಹೊಲಕ್ಕs ಚಕ್ರ ತಂದಾರಲ್ಲ! ಅದಕ್ಕೇ ನನಗ ಬಹಳ ಯೋಚನಿ ಆಗೇದ. ದೊಡ್ಡಕುಟುಂಬ ಅವನದು. ಆ ಹೊಲಾ ಬಿಟ್ಟರ ಬೇರೆ ಹೊಲಾಕೂಡ ಇಲ್ಲ ಅವನಿಗೆ.

ಚೆನ್ನಪ್ಪ—ಇರಲಿ ಬಿಡರಿ. ಈಗ ಇವನ್ನೆಲ್ಲಾ ರಗಳಿ ಆತಗ ಯಾಕ ಅಚ್ಚತೀರಿ. ಆತಂದ ಆತಗs ಈಗ ರಗಡ ಐತೆ. 'ಅಪ್ಪನ ಒಲಾ ಅಂತೂ ಯಾರ ತೆಲಿಒಡದರೂ ನಾ ಬಿಡಾಕಿಲ್ಲ. ಈ ಊರಾಗ ಯಾ ಗಂಡಸು ಬರತಾನಬರಲಿ ಅಂತ ನಮ್ಮ ಉಡಗ ರಾಮು ಅಂತೈತರಿ. ಅದರಡೇನು ಉಡಗಬಟ್ಟೀ ಅಂತ ನಾನು ಸುಮ್ಮಕ ಇದೀನಿ. ಉಟ್ಟಿಸಿದ್ದೇವ್ರು ಉಲ್ಲು ಮೇಸತಾನ ಎಪ್ಪಾ. ಎಂಗಾರ ಆದೀತು .......ಮಾಸ್ತರ ನಾ ಏಳಿದ್ದು ಏಳಿದರೇನು ಅಪ್ಪಗ.

ಶ್ರೀನಿವಾಸ—ಮತ್ತೇನದು ?

ಸದಾಶಿವಯ್ಯ—ಏನಿಲ್ಲ. ನೀವು ಆದಷ್ಟು ಬೇಗ ಪ್ರಸ್ತ ಮಾಡಿಕೊಳ್ಳಬೇಕು ಅಂತ ಚನ್ನಪ್ಪನ ಬಯಕೆ. ಅಂದರ ಎಲ್ಲಾ ಸರಿಹೋಗತದ. ಕೃಷ್ಣರಾಯರಿಗೂ ಸಮಾಧಾನ ಆಗ್ತದಂತ. ಮತ್ತೆ ಆಮೇಲೆ ಈ ವಿಷಯಗಳಿಲ್ಲ............

ಶ್ರೀನಿವಾಸ—ಅಲ್ಲ. ಮನಸ್ಸು ಸ್ತಿಮಿತವಾಗಿಲ್ಲದಿದ್ದಾಗ ಈ ಪ್ರಸ್ತಪ್ರಯೋಜನ ಯಾರಿಗೆಬೇಕು? ದಿನಕ್ಕೊಂದಕ್ಕೂ ಮಾವಯ್ಯ ಹೊಸ ಹೊಸ ಪೇಚು ತಂದಿಡೋ ಮುಂದ ಇದು ಹ್ಯಾಂಗ ಸಾಧ್ಯ? ಚನ್ನಪ್ಪನ ಹೊಲಾ ನುಂಗಿಹಾಕೋದಕ್ಕ ಏನೇನು ಮಾಡಿದ್ದಾರೆಂಬೋದನ್ನ ಮೊದಲ ತಿಳೀದಹೊರತು ನನಗೆ ಸಮಾಧಾನ ಇಲ್ಲ. ಅದೇನು ಸಂಗತಿ ನನಗ ಹೇಳಿರಿ.

ಸದಾಶಿವಯ್ಯ—ಆ ಹೊಲಾನೇ ಚನ್ನಪ್ಪಂದು ಅಲ್ಲ. ರಾಮುದೇವರದು ಹೊಲಾ. ಅವನು ಸರಿಯಾಗಿ ಹಣ ಸಲ್ಲಿಸೋದಿಲ್ಲ. ಆದ್ದರಿಂದ ಅದನ್ನು ಬೇರೆಯವರಿಗೆ ಕೊಡೋದು.

ಶ್ರೀನಿವಾಸ—ಹೊಲಾ ಚನ್ನಪ್ಪಂದು ಅಲ್ಲ! ರಾಮುದೇವರದು! ಏನು ಹೀಗೆಲ್ಲ ಹೇಳಿದರ ?

ಚೆನ್ನಪ್ಪ—ಔದ ಎಪ್ಪಾ! ಇಂಗ ಆಗ್ಯೆತಿ ಅದು. ದೇವರು ಒಲಾ ತನಗ್ಬ ಬೇಕು ಅಂದರ ಯಾಕ ತಗೋಬಾರದು. ಎಲ್ಲಾದೂ ಆತೆಂದ ಐತೆ. ನಮ್ಮದಂಬೋದು ಏನೈತಿ ಇಲ್ಲೆ.

ಶ್ರೀನಿವಾಸ—ನನಗ ನಿನ್ನ ವೇದಾಂತ ಬೇಕಿಲ್ಲ. ಮತ್ತ ನಿನ್ನ ಈ ವೇದಾಂತ ಜಗತ್ತಿನ ಕಾನೂನು ವ್ಯವಹಾರಗಳಿಗೆ ದಕ್ಕೋದಿಲ್ಲ. ಹೊಲ ರಾಮುದೇವರದು ಆದರ ಈ ವಿಷಯಾನ ಊರ ಜನರು ರಾಮುದೇವರೆದುರಿಗೆ ಬಗೆಹರಿಸಲಿ. ಮಾವಯ್ಯ ಯಾಕ ಸುಮ್ಮನ ತನ್ನ ಕೈಗೆ ಕಪ್ಪುಹಚ್ಚಿಕೊಳ್ಳೋದು. ಅಲ್ಲ. ಚನ್ನಪ್ಪ, ನಿನ್ನ ಪಟ್ಟೇದ ಹೊಲಾ ರಾಮುದೇವರದು ಆದದ್ದಾದರೂ ಹ್ಯಾಂಗ ?

ಚೆನ್ನಪ್ಪ—ಈಗ ಏಳೆಂಟು ವರ್ಷದಕೆಳಗೆ ನನ್ನ ಇರೇ ಉಡುಗ—ತೀರಿ ಕೊಂಡನಲ್ರಿ–ಅವಗ ಎಣ್ಣತರಬೇಕಾಗಿತ್ತು. ತೆರವಿಗಂತೆ ಎಡ್ಡನೂರು ರೂಪಾಯಿ ಬೇಕಾಗಿದ್ದವು. ನಿಮ್ಮ ಒಲದ್ದು ಸಾಗೋಳಿ ರಕವು ೬೦ ರೂಪಾಯಿನಂತಾಗ ನಿಂತಿತ್ತು. ಅಲ್ಲೆ ಇಲ್ಲೆ ಓದರ ಬಡ್ಡಿಕೊಡ ಬೇಕಾಗತದ ಅಂತ ಕಿಟ್ಟಪ್ಪ ದಣಿತಾಗs ದುಡ್ಡುಕೇಳಿದೆ. ನೂರಾ ನಾಲೊತ್ತುಕೊಟ್ಟು ಯಾಡ್‌ನೂರು ಬರ್ತಿಮಾಡಿದರು. ತಿರಗಿ ಕೊಡಬೇಕೆಂದ್ರ ಮೂರೊರಸ ವರ್ಸ ಬರಬಿತ್ತು. ನಾವ್ವ ಒಟ್ಟೇ ಬದಕಾಕ ಅಂತ ಊರುಬಿಟ್ಟು ಓದ್ವೆ. ತಿರಗಿ ಬಂದ ಮಳೇ ವರಸ ಕಿಟ್ಟಪ್ಪ ದಣಿಅಂದ, "ಚೆನ್ನಾ, ನಿನಗಕೊಟ್ಟ ರೂಪಾಯಿಗೆ ತಗಾದಿ ಮಾಡೋದು ಏನಐತಿ. ಸಾವಕಾಶ ಕೊಡವಂತಿ. ಆದರ ಆ ರೂಪಾಯಿ ದೇವರವು. ನಾನು ತಿರಗಿ ಕೈಲೆ ಹಾಕೇನಿ. ಅದಕ ದೇವರ ಎಸರ್ಲೇ ಒಲಾ ಬರಕೊಡು" ಅಂತ ಏಳಿ ಗುಮಾಸ್ತ ರಾಮಣ್ಣನ ಕಡಿಂದ ಒಂದು ಟಾಪುಕಾಗದವ್ಯಾಗ ಬರೆಸಿಕೊಂಡರು. ಆಗಾ, ಮರವರಸನs ದೇವರ ಕಣ್ಣ ತಗದಾ, ಬೆಳಿನೂ ಪಾಡಆತು. ಎಪ್ಪತ್ತು ರೂಪಾಯಿನೂ ತಿರಗಿಕೊಟ್ಟೆ.

ಶ್ರೀನಿವಾಸ—ಅಂದರ ಹೊಲಾ ಪೂರಾ ದೇವರದು ಹ್ಯಾಂಗಆತು. ಹೆಸರs ಒದಲಾಸಿ ಹೋತೇನು?

ಚೆನ್ನಪ್ಪ—ಊನೆಪ್ಪ. 'ತುರಡಗಿ' ಒಲಾ ಅಂತಇದ್ದ ಎಸರು ದೇವರ ಒಲಾ ಅಂತ ರಜಿಸ್ತರಆಗಿ ಬಂದೈತೆ ಅಂತ ಏಳಿದರು. ಯಾಕ ಅಂತ ಕೇಳಿದರ, ಒಸಾ ಕಾಯ್ದೇವು ಆಗೈತಿ. ಒಲಾ ಯಾರ ಎಸರ್ಲೇ ಬರ ಕೊಡ್ತಾರೋ ಅವರು ಬೇಕಾವರ ಎಸರು ಬದಲಿಮಾಡಬೋದು ಅಂತ ರಾಮಣ್ಣೋರು ಏಳಿದರು. ಒಲದಎಸರು ಯಾವದಿದ್ದರೇನು? ಪಟ್ಟೇವು ನನ್ನಎಸರ್ಲೆ ಐತಲ್ಲ ಅಂತ ಸುಮ್ಮಕ.ಆದೆ. ಮತ್ತೆ ಅದೂ ದೇವರ ಎಸರ ಅಂದವ್ಯಾಕ ಯಾಕ ಸುಮ್ಕೆತಂಟೆ ಅಂತ ಆಟಕ್ಕ ಬಿಟ್ಟೆ.

ಶ್ರೀನಿವಾಸ—ಹೊಲಾ ಬರದುಕೊಟ್ರೆ ಹೆಸರು ಯಾಕ ಬದಲಾಗತದ? ಇದು ಯಾವ ಹೊಸಕಾಯದೆ ಬಂತಪ್ಪ! ನಿನಗ ಇಷ್ಟೂ ತಿಳಿಲಿಲ್ಲೇನೊ?

ಚೆನ್ನಪ್ಪ—ನಮಗೇನ ತಿಳೀತೈತರಿ. ಒಂದೊಪ್ಪತ್ತಿಗೆ ತಿಳಿದಾದರೂ ಏನ ಮಾಡಂಗ ಅದೀವರಿ ನಾವು ? ಯಾರ ಕೂಡಬಡದಾಡದೈತಿ ? 'ಒಲಕ್ಕಿ ಅಚ್ಚಿದ ಬೇಲೀನ್ಸ ಒಲಾವೋದರ' ಏನ ಮಾಡದೈತಿ ? ನಿಮ ತಂದಿ ತರುವಾಯ ನಿಮ್ಮ ಮಾವನೋರ ನಮಗ ಯಜಮಾನರು. ಅವರನ್ನ ನಂಬೀನಿ. ಮತ್ತ ನೆಂಬಿಗಿ ಇದ್ದವ್ಯಾಗ ದೇವರು ಎಂದೂ ಕೆಟ್ಟಮಾಡಾಕಿಲ್ಲ ಅಂತ ನನಗ ಪೂರಾ ಬರೋಸ ಐತೆ.

ಸದಾಶಿವಯ್ಯ—ಕೃಷ್ಣರಾಯರು ಧನಿಕರು. ಊರಿಗೇ ಸಾವುಕಾರರು. ಪ್ರಭಾವಶಾಲಿಗಳು. ಮೇಲಾಗಿ ವಿದ್ಯಾವಂತರು. ಕಾಯದೆ ಕಾನೂನು ಓದಿದವರು. ಚೆನ್ನಪ್ಪ ಅವರ ರೈತ. ಬಡವ; ಅವರ ಮುಷ್ಟಿಯಲ್ಲಿರುವವ. ಏನುಮಾಡಬಹುದು ಅವನು? ಏನೋ ಇತ್ತೀಚೆಗೆ ತಲಾಗ. ನೀವು ದೊಡ್ಡವರಾಗಿ, ಅಲ್ಪಸ್ವಲ್ಪ ಊರ ಬಗ್ಗೆ ಆದರ ತೋರಿಸೋದಕ್ಕ ಆರಂಭಿಸಿದವ್ಯಾಲೆ, ಅವನೇ ಹೇಳೋಹಾಂಗೆ, 'ನಮ್ಮ ಅರಸು ನಮ್ಮಕೈಗೆ ಸಿಕ್ಕ.' ಮೇಲೆ ಅಲ್ಪಸ್ವಲ್ಪ ಧೈರ್ಯತಾಳಿ ಆಗಾಗ ಹುಮ್ಮಸ್ಸಿನಿಂದ ನಿಲ್ಲತಾನೆ ಅನ್ನರಿ. ಇಲ್ಲದೇ ಇದ್ದರೆ ಅವನೇ ಅಂದಹಾಂಗ, 'ನಿಮ್ಮ ಯಜಮಾನರು ತೀರಿಕೊಂಡಮೇಲೆ ಊರ ಪರಿಸ್ಥಿತಿ ಬಹಳ ಕೆಟ್ಟುಬಿಟ್ಟದೆ.'

ಶ್ರೀನಿವಾಸ—ಆಗಲಿ. ಆಗಲಿ. ಈ ಎಲ್ಲ ವಿಷಯಗಳ ಬಗ್ಗೆ ನಾನು ಕೂಲಂಕಷವಾಗಿ ವಿಚಾರಮಾಡಿಕೊಳ್ಳುತೀನಿ.

ಚೆನ್ನಪ್ಪ—( ನೇಪಥ್ಯದ ಕಡೆಗೆ ನೋಡಿ. ) ಅಯ್ಯ! ರಾಮಣ್ಣೋರು ಬಂದರಲ್ಲ.

( ರಾಮಣ್ಣನ ಪ್ರವೇಶ )

ಸಲಾಂ, ರಾಮಣ್ಣೋರ.

ಸದಾಶಿವಯ್ಯ—ನಮಸ್ಕಾರ ಗುಮಾಸ್ತರ.

ರಾಮಣ್ಣ—ನಮಸ್ಕಾರ, ನಮಸ್ಕಾರ. ಏನು ಸೀನಣ್ಣ. ನೀವು ನಿನ್ನೆ ರಾತ್ರಿ ಬಂದೆರಂತ ಊರಿಗೆ! ದರ್ಶನವೇ ಇಲ್ಲ. ಮುಂಜಾನೆದ್ದ ಘಳಿಗ್ಗೆ ರಾಮಪೂರಕ್ಕ ಬಂದುಬಿಟ್ಟೇರಿ. ಊರವ್ಯಾಲ ಪ್ರೇಮ

ಅಂದರ ಹೀಂಗ ಇರಬೇಕು. ಮಾಸ್ತರ ನೀವು ನಂಬರಿ ಬಿಡ್ರಿ. ಸೀನಣ್ಣ ಅಂದರ ದೇವರಿದ್ದಾಂಗ ಈ ಮನಿಸ್ಯಾ.

ಸದಾಶಿವಯ್ಯ—ಹೌದ್ಹಾದು. ಅವರಿಗೆ ಸಹಜವಾಗೇ ಊರಮ್ಯಾಲೆ ಪ್ರೇಮ ಅದೆ.

ಶ್ರೀನಿವಾಸ—ನೀನು ಇವೊತ್ತು ಇಲ್ಲಿಗೆಬಂದಕೆಲಸಾ ಆಯಿತೋ ಇಲ್ಲವೋ?

ರಾಮಣ್ಣ—ಕೆಲಸಾ ಏನು. ನೀವು ನಂಬ್ರಿಬಿಡ್ರಿ. ತೋಟಾ ನೋಡಿ ಕೊಂಡು ಹೋಗೋದಕ್ಕ ಅಂತಬಂದಿದ್ದೆ. ಮತ್ತೆ ಹಾಂಗೆ ಚನ್ನಗೂ ಊರಿಗೆ ಬಾ ಅಂತ ಹೇಳಬೇಕಾಗಿತ್ತು. ಅವನು ಇತ್ತಲಾಗ ಬಂದಾ ನಂತ ತಿಳೀತು. ಮತ್ತು ನನಗೂ ಬಸ್ಸಿನಿಂದೇ ಹೋಗಬೇಕಾಗಿತ್ತು. ಹಾಂ! ಚೆನ್ನಾ, ನೀನು ನಾಳೆ ಒಬ್ಬ ಓಲೆಕಾರನ್ನ ಕರಕೊಂಡು ಬಾ, ಏನಪ್ಪ. ಹಾಂ! ಹಾಂ! ಇದು ನೋಡು. ನಿಮ್ಮ ಮನಿಗೆ ಭೂಪುರದಿಂದ ಯಾರೋ ಇಬ್ಬರುಬಂದು ನಿಂತಾರ. ಹಾವು ಕಡದ ದಂತ ಯಾರಿಗೋ! ಮಂತ್ರ ಹಾಕಲಿಕ್ಕೆ ಕರೀಲಿಕ್ಕೆಬಂದಾರಂತ ಕಾಣಿಸ್ತದ ಅವರು ಇತ್ತಕಡೆ ಬರವವರು ಇದ್ದರು. ನೀನು ನಂಬು ಬಿಡು. ನಾ ಕಳಿಸಿಕೊಡತೀನಿ. ಮತ್ತೆ ಯಾಕ ಬರತೀರಿ ಅಂತ ಹೇಳಿಬಂದೀನಿ. ನೀನು ಹೋಗೇನಪ್ಪ.

ಚನ್ನಪ್ಪ—ಊನಪ್ಪ. ಓಗತೀನಿ. ಸಲಾಂ, ದಣಿ. ಸಲಾಂ, ರಾಮಣ್ಣೋರ. ಸಲಾಂರೀ ಮಾಸ್ತರ.

ಸದಾಶಿವಯ್ಯ—ಈ ಮುದಕ ಅಂದರ ಸೀನಣ್ಣ! ತಪ್ಪಿ ಅಂತಿಜನೊಳಗ ಹುಟ್ಟ್ಯಾನ ಅನಸ್ತದ. ಏನು ಅನುಭವ. ಎಷ್ಟು ಪರೋಪಕಾರ ಬುದ್ಧಿ. ಜನರು ಎಷ್ಟು ದೂರದಿಂದಾರ ಬಂದಿರುವಲ್ಲರ್ಯಾಕ, ಹಾವು ಕಡದದ್ದ ಅಂತ ಇಷ್ಟು ಹೇಳಿದರ ಸಾಕು, ಅಲ್ಲಿ ತನಕ್ಕ ಹೋಗಿ ಮಂತ್ರಹಾಕಿಬರತಾನ. ಮಂತ್ರನಾರ್ದ ಎಂಥಾದು? ಅರ್ಧತಾಸಿ ನೊಳಗ್ಗ ವಿಷ ಇಳಿದಬಿಡತದ್ದ. ಮಂತ್ರದ ಜೊತೆಗೆ ಆ ತೊಪ್ಪ ಲಾನೂ ಹಂಗೇ ಅದ.

ಶ್ರೀನಿವಾಸ—ಹೌದ್ಹಾದು. ನನಗೇನು ಗೊತ್ತಿಲ್ಲ? ಆದರ ಇಂಥಾ ಗಾರುಡೀಗೆ ಗಾರುಡಿ ಇದ್ದಾರಲ್ಲ ನಮ್ಮಲ್ಲಿ ಅದಕ್ಕೇನಂತೀರಿ?

ಸದಾಶಿವಯ್ಯ—ಹೌದು. ಇಂಥವನ ಮೇಲೆ ಏನಾದರೂ ಒಂದು ಪೇಚ ತರವರು ಎಂಥಾ ಕ್ರೂರರಾಗಿರಬೇಕು.

ರಾಮಣ್ಣ—ಯಾರಿಗೆ ಯಾರು ಪೇಚ ತರತಾರ್ರೀ? ದೇವರ ಕೈಯಾಗಿನ ಮಾತು? ನೀವು ನಂಬರಿ ಬಿಡರಿ. ಅದು ಅವರವರ ದೈವ. ಈಗ ಯಾವನಿಗೋ ಹಾವು ಕಡೀತು. ಯಾರ ಮಾಡಿದ್ದು ಅದು?

ರಾಮಣ್ಣ—ಯಾರದು ಯಾರು ಕಸಗೋತಾರ ಸೀನಣ್ಣ? ನೀವು ನಂಬರಿ ಬಿಡಿರಿ, ಚನ್ನ ಸಾಲಾ ತೊಗೊಂಡ, ಖರೀದಿಗೆ ಹೊಲಾ ಬರಕೊಟ್ಟ. ಸಾಲಾ ತೀರಸಲಿಲ್ಲಾ ಹೊಲಾ ಹೋಯ್ತು.

ಶ್ರೀನಿವಾಸ—ಯಾರಿಗೆ ಯಾರು ಪೇಚು ತರತಾರ ಅಂತೀದಿ! ಈಗ ಈ ಚನ್ನಪ್ಪನ ಹೊಲಾನ ಅವನಿಂದ ಕಸಕೊಳ್ಳೋ ಕಾರಸ್ಥಾನಾ ನಡದ ದಲ್ಲಾ, ಅದನ್ನ ಯಾರ ತಂದದ್ದು?

ಶ್ರೀನಿವಾಸ—ಖರೀದಿಗೆ ಕೊಟ್ಟ? ಹೊಲಾ ಹೋಯ್ತು?

ರಾಮಣ್ಣ—ಹೌದು ಅಂದೆ. ವಿಶ್ವಾಸ ಖರೀದಿ.

ಶ್ರೀನಿವಾಸ—ಇದೆಂಥ ಖರೀದಿಯೋ! ಯಾರಿಗೆ ವಿಶ್ವಾಸ ಆಗಬೇಕು ಇದರ ಮ್ಯಾಲೆ?

ರಾಮಣ್ಣ—ನೀವು ನಂಬರಿ ಬಿಡ್ರಿ. ಕಾಗದಪತ್ರ ಸುಳ್ಳೇನು? ಓಹೋ ಬಸ್ಸು ಬಂತು. (ಗಡಿಬಿಡಿಯಿಂದ ಹೊರಡುವನು.)

ಶ್ರೀನಿವಾಸ—ಏನಿದೆಲ್ಲ ಅನಾಹುತ! ಆಗಲಿ ಮಾಸ್ತರ, ನೀವು ಸಾಯಂ ಕಾಲ ಬರ್ತೀರೆಲ್ಲ. ಏಳು ಗಂಟೆಗೆ ನಿಮ್ಮನ್ನ ಕಾಣತೀನಿ. ಸಾಮಾನು ಮಾತ್ರ ನಿಮ್ಮ ಮನೆಯಿಂದ ಡಾಕ್ಟರ ಮಾಮಾನ ಮನೆಗೆ ತರಿಸಿಕೋ ಬೇಕು.

ಸದಾಶಿವಯ್ಯ—ನಾನಾಗಲೇ ಡಾಕ್ಟರ ನೀಲಕಂಠರಾಯರಿಗೆ ಹೇಳಿ ಕಳಿ ಸೀನಿ. ಅವರು ತರಿಸಿಕೊಂಡಿರಲಹುದು.

ಶ್ರೀನಿವಾಸ—ಆಗಲಿ. ನಾನು ಹೊರಡತೀನಿ. ನಮಸ್ಕಾರ. (ಹೋಗುವನು)

ಸದಾಶಿವಯ್ಯ—ನಮಸ್ಕಾರ (ಹೋಗುವನು.)

— ತೆರೆ —

## ಪ್ರವೇಶ ಎರಡು

[ ಕೃಷ್ಣರಾಯರ ಮನೆ. ಮಾರನೆಯ ದಿನ. ಹಗಲು ಮೂರು ಗಂಟೆಯ ಸಮಯ. ಮಂಚದ ಮೇಲೆ ವೆಂಕಪ್ಪಾಚಾರ್ಯರು. ಕೃಷ್ಣರಾಯರು ಕುರ್ಚಿಯ ಮೇಲೆ ಮಾತಾಡುತ್ತಾ ಕುಳಿತಿದ್ದಾರೆ. ]

ಕೃಷ್ಣರಾಯರು—ಆಗಲಿ, ಆಗಲಿ. ಈ ಸಾರೆ ರಾಮದೇವರ ಜಾತ್ರೆಯೊಳಗ ನಿಮ್ಮ ಪಾಠಶಾಲೆ ಹುಡುಗರಿಗೆ ಮಂತ್ರಗಳ ಸ್ಪರ್ಧೆ ಇಡರಿ. ಏನು ಒಂದು ೨೦–೨೫ ರೂಪಾಯಿಯೊಳಗ ಮಾಡಿಬಿಡರಿ ಆಯ್ತು.

ವೆಂಕಪ್ಪಾಚಾರ್ಯರು—ಹಾಂ! ಅದೇ ಅಂತೀನಿ. ಈ ಮಂತ್ರ ಅಂದರ ಹೇಳತೀನಿ. ಈ ಹಾವಿನ ಮಂತ್ರ ಚೇಳಿನ ಮಂತ್ರ ಕೂಡ ನಾನು ಆಗಲೇ ಹೇಳಿದ ಮಾತಿಗೆ ನಿದರ್ಶನ ಅಂತ ಹೇಳಬಹುದು. ಅಷ್ಟು ದೂರ ಯಾಕೆ? ನಿಮ್ಮ ರಾಮಪುರದ ಚನ್ನಪ್ಪ ಈ ಮಾತಿಗೆ ಉದಾಹರಣೆ.

ಕೃ—ಹೂಂ! ಅವನ ಮಂತ್ರಕ್ಕೂ ಆ ಪವಿತ್ರ ವೇದಮಂತ್ರಕ್ಕೂ ಎಲ್ಲಿಯ ಸಾಮ್ಯ? ಆ ನೀಚನ ಮಂತ್ರೇನು ಸುಟ್ಟಿತು? ಮಂದಿ ಮಸೀ ಮುರಕನ ಮಂತ್ರ. ಉಂಡಮನಿ ಜಂತೆ ಎಣಸೊ ಜಾತಿ ಅವಂದು.

ವೆಂ—ನೀನು ಏನೇ ಅನ್ನು, ಈ ಕಡೆ ನಿನಗ ಅವನ ಮನಸಾ ಮನಸಾ ಕೆಟ್ಟಿರಬಹುದಾಗಲೀ; ಅವನು ಅನೇಕರಿಗೆ ಈ ಮಂತ್ರದಿಂದ ಉಪಯೋಗ ಆಗ್ಯಾನ. ಮತ್ತೆ ಜನಹಿತಕ್ಕಾಗಿ ಉಪಯೋಗ ಆಗೋ ಮಂತ್ರದಿಂದ ದೇವರೂ ಪ್ರೀತನಾಗತಾನ.

ಕೃ—ಉಪಯೋಗ ಏನ ಸುಡತದ? ದುರುಪಯೋಗ ಆಗೇದ. ನೀವೂ ಒಮ್ಮೊಮ್ಮೆ ಏನೇನೋ ಹೇಳಿಬಿಡತೀರಿ. ಅಲ್ಲಾ, ರಾಮ ದೇವರ ಗುಡಿಯೊಳಗ ಅಂತಿಜರ ಪ್ರವೇಶಕ್ಕ ನಾವೆಲ್ಲ ವಿರೋಧಿಸಿ ನಿಂತಾಗ, ಅವಾ, ನಮ್ಮ ಹೀನನ್ನ ಬೆನ್ನುಕಟಿಗೊಂಡು, ಆಗ ಇದ್ದ ತಾಲೂಕದಾರರ ಆಡಿಗಿಯವನಿಗೆ ಹಾವು ಕಡದಾಗ ಮಂತ್ರಹಾಕಿದ್ದರಿಂದ, ಅವರ ಕಡಿಂದ ನಮ್ಮ ಮೇಲೆ ಪ್ರಭಾವ ಹಾಕಿಸಲಿಲ್ಲೇನು?

ನಾವೂ ಅವರಿಗೆ ಕೇವಲ ಒಳಪ್ರಾಕಾರದೊಳಗ ಬರಗೊಟ್ಟೆವಿ ಅಂತ ಅನ್ನರಿ. ಆದರ ಅವಾ ತನ್ನೀ ಮಂತ್ರವನ್ನ ಸಾಕಷ್ಟು ದುರುಪಯೋಗವಾಡಿಕೊಳ್ಳತಾನ.

ವೆಂ—ಆದರೂ ಅವನು ಮಂತ್ರದ ದಶೀಂದ ಹಣ ತೆಗೆದುಕೊಳ್ಳೋದಿಲ್ಲವಲ್ಲ.

ಕೃ—ಏನು ದೊಡ್ಡವಾತು? ರೊಕ್ಕ ತೊಗೋತಿರಲಿಕ್ಕಿಲ್ಲ ಖರೆ ಆದರ ಆಮ್ಯಾಲೆ ಪ್ರಸಂಗ ಬಂದಾಗ ಅವರ ಕಡಿಂದ ವಾಡಿಸಕೊಳ್ಳೋ ಕೆಲಸ ಹ್ಯಾಂಗಿರತವ? ಆ ರೊಕ್ಕದಕಿಂತ ಎಷ್ಟೋಪಾಲು ಹೆಚ್ಚಾಗಿರತವ. ಏನೋ! ನೀವೇ ಶ್ಲಾಘಿಸಬೇಕು ಆ ಮುಂಡೇಗಂಡನ್ನ.

ವೆಂ—ಅಂತೂ ಏನೇ ಆಗಲಿ, ಜನರಿಗಂತೂ ಉಪಕಾರ ಆಗೇದ ಅವನ ಮಂತ್ರದಿಂದ. ಬಹಳಜನ, ತೀರ ಮರಣಾಂತಿಕರಾದವರಿಗೆ ಪ್ರಾಣ ಬಂದು ಅವನ್ನ ಹಾಡಿ ಹರಿಸಿದ್ದಾರ.

ಕೃ—ಇತರರಿಗೆ ಆಗಿರಬಹುದು ಆಚಾರ್ರೇ. ನನ್ನವುಟ್ಟಿಗೆ ವಾತ್ರ ಆ ಸೂಳೇಮಗ ಸತ್ತಹಾಂಗೆ. ನನ್ನ ಅನ್ನ ಉಂಡು ನನ್ನ ಮನೀಸೇ ಮುರಿಬೇಕು ಅಂತಾನೆ.

ವೆಂ—ಅವನದೇನು ಯೋಗ್ಯತೆ. ಬಡರಂಡೇಗಂಡ.

ರಾಧಾ—(ಪ್ರವೇಶಿಸಿ) ಅಡಕಿ ಡಬ್ಬಿ ಈ ಕಡೆ ಕೊಡತೀರೇನು?

ವೆಂ—(ಅಡಕಿಡಬ್ಬಿಯನ್ನು ಕೊಡುತ್ತ) ಊಟ ಆಯ್ತೇನು? ಅಡಿಗಿ ಏನಾಗಿತ್ತು?

ರಾಧಾ—(ಡಬ್ಬಿಯನ್ನು ತೆಗೆದುಕೊಂಡು) ಅನ್ನ, ಸಾರು, ಪಲ್ಲ್ಯ, ಮೂರೇ ಇವತ್ತು. (ಅಡಕಿ ಹಾಕಿಕೊಳ್ಳುತ್ತ) ಏನೋ ಬಡರಂಡೇಗಂಡ ಅಂತ ಅಂತಿದ್ರಿ? ಯಾರ ಸುದ್ದಿ?

ವೆಂ—ನಿಮ್ಮ ರಾಮಪುರದ ಚನ್ನನ ಸುದ್ದಿ. ಕೃಷ್ಣರಾಯನಿಗೆ ಅವನ ವಿಷಯ ತಪ್ಪು ಕಲ್ಪನಾ ಅಂತು ಆಗೇದಲ್ಲಾ! ಅವಂದು ಏನೇ ಆಗಲಿ. ಪಾಪ! ಸೀನಣ್ಣನ ವ್ಯಾಲೆ ಅವನ ದಶಿಯಿಂದ.......

ಕೃ—ಆಚಾರ್ರ! ಸಣ್ಣತನದಿಂದ ನನ್ನ ಸ್ವಭಾವ ಗೊತ್ತಿದ್ರೂ ಮತ್ತೆ ಮತ್ತೆ ಅದೇ ಮಾತಾಡತೀರಿ ಅಂದರ, ಉಪಾಯ ಇಲ್ಲ ಅದಕ್ಕ. ನೀನಗ ಬುದ್ಧಿ ಬರಬೇಕಾದರ, ಚನ್ನಗ ಛಂದಾಗಿ ಬಿಸಿ ಆಗಲಿಕ್ಕಬೇಕು. ಆ ನೀನಸು ಏನು ಸಣ್ಣ ಕೂಸಲ್ಲ ಈಗ.

ರಾಧಾ—ಅವನಿಗೆ ಹಾಂಗ ಬುದ್ಧಿ ಇದ್ದರ್ರ ಹೀಂಗೆಲ್ಲ ಎಲ್ಲಿ ಆಗತಿತ್ತು? (ಅಳುವ ದನಿಯಲ್ಲಿ) ಸಣ್ಣತನದಾಗ ತಂದೀ ತಾಯೀನ್ನ ಕಳಕೊಂಡು ಪರದೇಶಿ ಆದ. ಈಗ ಸಾಕಿ ಸಲಹಿದ್ದೋರ ನೆರಳಿಗೆ ಎರವಾದ. ಮುಖ್ಯ ನನ್ನ ದೈವ ಖೊಟ್ಟಿ.

ಕೃ—ನೀನ್ನ ಮಾಡಿದ್ದು ಇದೆಲ್ಲ. ಅವನ್ನ ಮುದ್ದಿಸಿ ಮುದ್ದಿಸಿ ಹಾಳು ಮಾಡ್ದಿ. ಕಡೀಗೆ ನನ್ನದು ಸಹಿತ ಲಕ್ಷ್ಯ ಇಲ್ಲದ್ಹಾಂಗ ಆಗಿ ಹೋಯಿತು. ತನಗ ಹಿತಚಿಂತಕರ್‍ಯಾರು, ಕುತ್ತಿಗಿಕೊಯ್ಯೋರು ಯಾರು ಅನ್ನೋ ಜ್ಞಾನ ಸಹಿತ ಇಲ್ಲದಷ್ಟು ಮದ ಏರಿಬಿಟ್ಟಿತು.

ವೆಂ—ಹೌದು ಸಹವಾಸದೋಷದಿಂದ ಮನುಷ್ಯನ ಮನಸ್ಸು ಒಮ್ಮೊಮ್ಮೆ ಕೆಡೋದುಂಟು. ಆದರ ಎಲ್ಲಾನ್ನೂ ಸಂಬಾಳಿಸಿಕೊಳ್ಳೋದು ಮನೆ ಯಜಮಾನಗ ಕಷ್ಟ ಆಗತದ. ಏನು ಮಾಡೋದು ವಿಧಿ ಇಲ್ಲ. ಕ್ಷಮಾಶೀಲತೆ ಬೇಕು.

ಕೃ—ಒಟ್ಟು ನಾನೇ ಮೂರ್ಖ ಅಂತ ನಿಮಗೆಲ್ಲಾರಿಗೂ ಅನಿಸಿ ಹೋಗೇದ. ಅವನ ಸೊಕ್ಕೆಷ್ಟು? ಬಿಂಕ ಎಷ್ಟು? ಬಿ ಎ. ಪಾಸಾದ ಮ್ಯಾಲಂತೂ ಭೂಮಿಮ್ಯಾಲೆ ತನ್ನಹೊರತು ಎಲ್ಲಾರೂ ಮೂರ್ಖರಂತ ಅವನ ಕಲ್ಪನಾ ಆಗಿಹೋತು. ಅಪಾ, ವಕೀಲಿ ಪಾಸಾದರೂ ಸನಗಂತೂ ಈ ವ್ಯವಹಾರದ ಕಾಲಾಗ ಮಾಡೋದು ಆಗಲಿಲ್ಲ. ಎಲ್.ಎಲ್.ಬಿ.ಗೆ ಹೋಗು ಅಂತ ಅಂದರ, "ಸುಡುಗಾಡು ಅದಕ್ಕ್ಯಾರು ಹೋಗ್ತಾರ" ಅಂದ. ಊರಾಗಿದ್ದುಕೊಂಡು ಹೊಲಾಮನಿ ವ್ಯವಸ್ಥಾ ಮಾಡು ಅಂದರ, ಆ ಹೊಲಿಸೂಳೀಮಕ್ಕಳನ್ನ ತಲೀಗೇರಿಸಿಕೊಂಡು ಊರಾಗ ಮರ್ಯಾದಿ ಹೋಗೋಹಾಂಗ ಮಾಡಿದ. ನಾನು ಒಂದು ಮಾತು

ಅಂದದ್ದಕ್ಕ ಬಿಂಕಮಾಡಿ ಸೆಟಗೊಂಡ ಹೋದರ ಇವು ಹೆಣಮಕ್ಕಳು ಅತಗೋತ ಕೂತವು.

ರಾಧಾ—ಹೌದು ಮತ್ತೆ! ಹೆಣಮಕ್ಕಳಿಂದ ಅದಕ್ಕಿಂತ ಹೆಚ್ಚಿಗೇನಾಗತವ? ಅವರ ಕೈಯ್ಯಾಗ ಇರತದವ್ಣ ಏನು?

ಕೃ—ಏನು ಇರತದ್ವ? ಹಟಮಾರಿತನ ಇರತದ್ವ. ಅವ ಹೋದರ ಹೋದ. ಸುಮ್ಮನಿರ್ರಿ. ತಾನೇ ಬರತಾನ ಅಂದರ ಕೇಳಲಿಲ್ಲ. ಮಂದಿ ಕಡಿಂದ, ಮತ್ತ ನಮ್ಮ ಸಿದ್ದಲಿಂಗಪ್ಪನ ಕಡಿಂದ ಪತ್ರ ಹಾಕಿಸಿ ದೆಲ್ಲ? ಮತ್ತೆ ನಿನ್ನ ರಂಭಾಟಕ್ಕ ರೂಪಾಯಿನೂ ಮನಿ ಆರ್ಡರ ಮಾಡಿದೆ, ಆಚಾರ್ರ. ಮನಿಆರ್ಡರು ವಾಪಸ್ ಬಂತು. ಈ ಸುದ್ದೀ ನಿಮಗ ಗೊತ್ತಿರಲಿಕ್ಕಿಲ್ಲ. ಒಂದಂತ್ವ ಹೇಳಲ್ಯಾ: ರಾಮ ಪುರದಾಗ ಹೊಲೇರ ಸಾಲಿ ಹಾಕಿ, ಆ ಚನ್ನನ್ನ ಬೆನ್ನು ಕಟಗೊಂಡಾ. ಬ್ಯಾಡೋ ಅವರು ಬದುಕು ಮಾಡುವವರು ಅಲ್ಲ, ಹೊಲಾ ಇನ್ನೊಬ್ಬ ರಿಗೆ ಕೊಡೋಣ ಅಂದರ ಹಟಮಾಡಿ ಮತ್ತೆ ಒಂದು ವರ್ಷ ಅವನಿಗೆ ಹೊಲಾ ಕೊಟ್ಟು ತಾನು ಎದ್ದು ಹೋದ. ಆ ಚನ್ನನ ಸುದ್ದಿ ಏನು ಹೇಳಲಿ. ನಾಗೋಳಿ ರಕಮು ಕೊಡಬೇಕಾದರ ನಮಗ ಚಳ್ಳೀ ಹಣ್ಣು ತಿನಸಲಿಕ್ಕೆ ಹತ್ತ್ಯಾನ. ಮತ್ತ ಇಲ್ಲಿದ್ದಾಗ ಆ ಸಣ್ಣ ಜಾತೀ ಯವನ ಮಾತು ಕೇಳಿ ಊರಾಗ ಮರ್ಯಾದಸ್ತರ ವಿರೋಧ ಕಟ್ಟಿ ಕೊಳ್ಳೋ ಕಾರಸ್ಥಾನ ಬ್ಯಾರೆ. ಇಷ್ಟೆಲ್ಲಾ ಆದರೂ ಅವನು ಹುಡುಗನ್ವ ನಿಮಗೆಲ್ಲ.

ರಾಧಾ—ಯೆಂಕಣ್ಣಾಚಾರ್ರ್ವ! (ಕಣ್ಣು ಸನ್ನೆಮಾಡಿ) ಈ ಸಾರೆ ಆತ ಹೈದ್ರಾಬಾದನಿಂದ ಬಂದಾಂದರ ನೀವಾದರೂ ಸ್ವಲ್ಪ ಛೀ ಮಾಡ ಬೇಕು.

ಕೃ—ಏನ ಛೀ ಮಾಡಸ್ತೀದಿ? ಒಂದು ಅಂದರ ನಾಕು ಉತ್ತರ ಹೇಳ ತಾನ ಅವ. ಛೀ ಮಾಡಿ ಹೇಳಲಿಕ್ಕೆ ಅವನೇನು ಸಣ್ಣ ಹುಡುಗನ? ನನಗ ಗೊತ್ತದ ಅವನ ತಲಿ ಯಾರ ಕೆಡಸ್ತಾರ, ಅವರು ನಮ್ಮ ಒಗೆತನ ಯಾಕ ಮುರೀಬೇಕಂತಾರ ಅಂಬೋದು ನನಗ ಗೊತ್ತದ.

ಅವಕ್ಕ ಏನು ಮಾಡಬೇಕು ಅಂಬೋದು ನನಗ ಗೊತ್ತದ. ಕಾಲು ಬಿದ್ದುಕೋತ ಬಂದರಾತಲ್ಲ ಅಂವಾ. ಆಚಾರ್ರ, ಅಂವಾ ಇಲ್ಲಿ ಆನಕ ಬರಿಲಿಕ್ಕೇ ಇಲ್ಲ. ಒಂದು ವೇಳೆ ಬಂದರೂ ನೀವೇನು ಛೀ ಮಾಡಬ್ಯಾಡರೀ, ಥೂ ಮಾಡಬ್ಯಾಡರಿ. ಬಿಂಕಾಮಾಡಿ ಸೆಟು ಕೊಂಡು ಹೋಗ್ಯಾನ, ಹೋಗಲಿ. ಯಾರ‍್ಯಾರು ಎಷ್ಟೆಷ್ಟು ಅಂವಗ ಮಾಡತಾರೋ ಅಂವಾ ಎಷ್ಟು ಮಾಡಿಸಿಕೊಳ್ಳತಾನೋ ತಿಳೀತದ.

ವೆಂ—ಭಗವಂತನ ಚಿತ್ತಕ್ಕ ಬಂದರ ಯಾವುದು ಏನಾಗಲಿಕ್ಕಿಲ್ಲ? ಆತನ ಇಚ್ಛಾ ಹ್ಯಾಗೋ ಹಾಗ. ನಾವು ಏನು ಅಂದಕೊಂಡರ ಏನು ಫಲ? ನೀನು ಹೇಳೋ ಹಾಗ ಆತಗ ಪ್ರಪಂಚದ ಅನುಭವ ಬಂದ ಹೊರತು, ತನ್ನ ಹಿತಾಹಿತ ತಿಳಿಯೋದು ಕಷ್ಟ. (ಏಳುತ್ತ) ಆಗಲಿ, ನಾನು ಹೊರಡತೀನಿ. ಅಯೋಧ್ಯಾಕಾಂಡ ರಾಮಾಯಣ ಬೇಕಾಗಿತ್ತು.

ಕೃ—ಒಳ್ಳೇದು ಕೊಡತೀನಂತ. ನೀವು ಈ ಬಿಸಿಲೊಳಗ ಮನಿಗಾದರೂ ಯಾಕ ಹೋಗ್ತೀರಿ? ಇಲ್ಲೇ ವಿಶ್ರಾಂತಿ, ಪುಸ್ತಕ ಪಾರಾಯಣ ಆಗಲಿ. ಸಂಜೀ ಮುಂದ ಬಿಸಿಲು ತಗ್ಗಿಸಿ ಹೋಗರಿ. ಮನಿಯೊಳಗ ವಿಶೇಷ ಕೆಲಸ ಏನಾದರೂ ಅದು ಏನು?

ವೆಂ—ಕೆಲಸ ಏನೂ ಇಲ್ಲ. ಆದರೂ ಮನೀಗೆ ಹೋಗಿ ಬಂದರ ಆಗಬಹು ದಲ್ಲಂತ.

ರಾಧಾ—ಅಯ್ಯ, ಮತ್ತ ಹೋಗೋದು ಬರೋದು ಏನು? ಬಿಸಿಲ ತಗ್ಗಿಸಿ ಹೋಗರಿ.

ವೆಂ—ಆಗಲಿ. ನೀವಿಬ್ಬರೂ ಇಚ್ಛಿಸುತ್ತಿರುವಾಗ ನಾನ್ಯಾಕ ಹಟ ಮಾಡೋದು. (ರಾಯರು ಪಡಸಾಲೆಗೆ ಹೋಗುವರು) ಸುಮಿತ್ರಾ ಎಲ್ಲಿ?

ರಾಧಾ—ನೀಲಕಂಠರಾಯನ ಮನೆಗೆ ಊಟಕ್ಕ ಹೋಗ್ಯಾಳ. ತೊಟ್ಟಲು ಇವತ್ತು ಅವರ ಮನ್ಯಾಗ.

ವೆಂ—ಸರಿ ಸರಿ, ನೀಲಕಂಠರಾಯನ ಮಗಳಿಗೆ ಪಾಪ, ಇನ್ನೂ ವರಾನೇ ಸಿಗಲಿಲ್ಲ ಕಾಣಸ್ತದ. ಮೊನ್ನೆ ಆ ಕಾಡಲೂರವರು ಯಾರೋ ನೋಡಲಿಕ್ಕೆ ಬಂದಿದ್ದರು. ಏನಾಯಿತೋ! ಮನಸ್ಸಿಗೆ ಬಂತೇನು ಅವರಿಗೆ?

ರಾಧಾ—ಮನಸ್ಸಿಗೆ ಬರದೆ ಏನು? ಹುಡಿಗಿ ಭಂಗಾರ ಆಗೇದ. ವರ ದಕ್ಷಿಣಿ ಎರಡು ಸಾವಿರ ಕೇಳತಾರಂತ.

ವೆಂ—ಇವರು ಅಷ್ಟೇನು ಕೊಟ್ಟಾರು ಪಾಪ!

ರಾಧಾ—ಹೌದು, ಅವರಿಗೆ ಅಷ್ಟು ಕೊಡೋದು ಎಲ್ಲಿ ಆಗ್ತದ? ಎಂಥಾ ವರಕ್ಕ ಆದರೂ ಕೊಟ್ಟು ಬಿಡೋಹಾಂಗ ಅದನs? ಒಂದs ಹುಡಿಗಿ. ನಮ್ಮ ಸೀನಪ್ಪ ಏನೋ ಆಕೀಗೆ ಒಳ್ಳೇ ಮನಿ ನೋಡಿ ಕೊಡಸ್ತೀನಿ ಅಂತ ಹೇಳ್ಯಾನಂತ.

ವೆಂ—ಹೌದು, ಪಾಪ! ಅಷ್ಟಾದರೂ ಬ್ಯಾಡ? ಸೋದರ ಮಾವನ ಮಗಳು ತಾನೇ ಮದಿವಿ ಮಾಡಿಕೋಬೇಕು ಅಂತ ಮಾಡಿದ್ದ. ಆಗಲಿಲ್ಲ. ಮತ್ತೆ ಅವಳಿಗೆ ಒಂದು ಒಳ್ಳೇ ವರಾ ತಂದು ಕೊಡೋದು ಅಗತ್ಯ ಅಲ್ಲ? ಏನs ಅನ್ರಿ, ಒಳ್ಳೇ ಮನಸ್ಸಿನ ಹುಡುಗ. ಸುಸಂಕೃತ ಹೃದಯ ಆತನದು.

ಕೃ—(ಕೋಟು ಟೊಪ್ಪಿಗೆ ಹಾಕಿಕೊಂಡು ಪುರಾಣ ಪುಸ್ತಕದೊಡನೆ ಪ್ರವೇಶಿಸಿ) ಹೌದರೀ ಆಚಾರ್ರ, ಅವಾ ಸುಸಂಸ್ಕೃತ. ನೀಲಕಂಠರಾಯ, ಆತನ ಜನ ಎಲ್ಲಾರೂ ಒಳ್ಳೆಯವರು, ರೂಪವಂತರು, ನಾವೆಲ್ಲ ಅಸಂಸ್ಕೃತರು, ಕುರೂಪಿಗಳು. ಅಂತೇ ಅವಗ ನಾವೂ ಅಂದರ ಆಗೋದಿಲ್ಲ. ಆಯ್ತೋ?

ವೆಂ—ಅಲ್ಲ, ನಾನು ಅಂದದ್ದು ಹಾಗಲ್ಲ. ನಿಮ್ಮ ಬಗ್ಗೆ ನನಗಿರುವ ಆದರ, ಪ್ರೇಮ, ನಿಮ್ಮ ಮುಂದ ನಾನು ಬಿಚ್ಚಿ ಹೇಳೋದದನs? ಏನೋ, ನೀಲಕಂಠರಾಯನ ಮಗಳ ಮದುವೆ ಮಾತು ಹೊರಟು ಆ ವಿಷಯ ಬಂತು. ಹೌದು, ನಾನು ಆ ಮಾತು ಆಡಬಾರದಾಗಿತ್ತು.

ಕೃ—(ನಿಟ್ಟುಸಿರುಬಿಟ್ಟು) ವಾಸ್ತವ ಆಚಾರ್ರ! ನೀವು ಆಡಬಾರದಾಗಿತ್ತು.

ನಾನು ಈ ಮಾತು ಆಡಬಾರದಾಗಿತ್ತು. ಆದರ ಪ್ರಸಂಗ ಬಂದರ ಎಲ್ಲರೂ ಆಡೇ ಆಡಬೇಕಾಗತದ. ನಾನು ಆಡಿದರ ನಿಮಗ ನಂಬಿಕೆ ಆಗಲಿಕ್ಕಿಲ್ಲ. ನಮ್ಮ ಸೀನನ ತಲಿ ತಿರಿಗಿಸಿದೋರು ಅಂದರ ಆ ನೀಲ ಕಂಠರಾಯನ ಹೆಂಡತಿ, ಮಗಳು, ಗೊತ್ತದನs? ಹೋಗಲಿ. ಯಾರ್‍ಯಾರು ಏನೇನು ಮಾಡತಾರೋ ನೋಡತೀನಿ. ಒಳ್ಳೇದು ನಾನು ಹೊರಡತೀನಿ, ಅಂಗಡೀಗೆ ಹೊತ್ತಾಗೇದ. (ಕೃಷ್ಣರಾಯರು ಹೋಗುವರು. ಸುಮಿತ್ರಾ ಪ್ರವೇಶಿಸುವಳು. "ನೂಲೋಲ್ಯಾಕ ಚನ್ನಿ" ಗೊಣಗುತ್ತಿರುವಳು.)

ವೆಂ—ಡಬ್ಬಿ ಏನಮ್ಮಾ ಕೈಯಲ್ಲಿ? ಬಿಸಿಲೊಳಗs ಬಂದು ಬಿಟ್ಟೆಯಲ್ಲ.

ರಾಘ—ಹೌದಲ್ಲ! ಬಿಸಿಲು ತಗ್ಗಿಸಿ ಬರಬಾರದಿತ್ತ. (ಸುಮಿತ್ರಾ "ಹೌದು" ಎನ್ನುತ್ತ ಒಳಗೆ ಹೋಗುವಳು. ವೆಂಕಪ್ಪಾಚಾರ್ಯರು ಪುರಾಣದ ಓಲೆಗಳನ್ನು ತಿರುವಿ ಹಾಕುತ್ತ ನೋಡುತ್ತಿರುವರು. ಸುಮಿತ್ರ ಚರಕವನ್ನು ತಂದು ಇಟ್ಟು, ಮೂಳು ಜಾಡಿಸಿ, ಸರಿಪಡಿಸಿ, ನೂಲಲು ಆರಂಭಿಸುವಳು. "ನೂಲೋಲ್ಯಾಕs ಚನ್ನೀ" ಗೊಣಗುತ್ತಿರುವಳು)

ರಾಘ—ಇದೇನs? ಈಗ ಯೇಳೆಂಟು ತಿಂಗಳಿಂದ ಕೈಲೇ ಹಿಡದಿದ್ದಿಲ್ಲ. ಇವತ್ತ ಯಾಕ ಹೊರಗ ಬಂತು.

ಸುಮಿತ್ರಾ—(ನೂಲುತ್ತ, ದಾರ ಸರಿಪಡಿಸಿ) ಹೌದು. (ನೂಲೋಲ್ಯಾಕ ಚನ್ನೀ.)

ವೆಂ—(ಇತ್ತ ಲಕ್ಷಿಸಿ) ಊಟಕ್ಕ ಯಾರ್‍ಯಾರು ಬಂದಿದ್ದರಮ್ಮ?

ಸು—ಆಂ! ಹೂಂ! ಎಲ್ಲಾರೂ ಬರತಕ್ಕವರು.

ರಾಘ—ಅಡಿಗಿ ಏನೇನು ಮಾಡಿದ್ದರು?

ಸು—ಊಂ. ಥೂ ಇದು ಹರದು ಹರದು ಹೋಗತದ ತಾಯೀ. ಆಂ ಅಡಿಗ್ಯ? ಅಡಿಗೀ. ಅದೇ ನಾಮಕರಣದ ದಿವಸ ಮಾಡೋದೆಲ್ಲ ಮಾಡಿದ್ರು.

ರಾಧಾ—ಸುನೀತಾಗ ಬಂದ ವರಾ ಗಟ್ಟಿ ಆತ್ಯಂತ?

ಶ್ರೀ:—ಅತ್ತೆವ್ವ, ನನ್ನತಲೆ ವ್ಯಾಲ ಕಲ್ಲುಹಾಕಿದರೂ ನಾನು ನುಂಗಿ ಕೊಳ್ಳೋದಕ್ಕ ತಯಾರಾಗೀನಿ. ನನ್ನ ದಶಿಂದ ಅವರಿಗೆ ಅಂಬೋದು, ನನ್ನವ್ಯಾಲಿನ ಸಿಟ್ಟಿನಿಂದ ರಾಮಪುರದ ಬ್ಯಾಗಾರ ವ್ಯಾಲೆ ಸಿಟ್ಟು ತೆಗೆಯೋದುಮಾಡಿದರ ನನ್ನಹೊಟ್ಟ್ಯಾಗಿನ ಕರಳು ಹೊರಗಬರತಾವ.

ವೆಂ—ಇವು ಕೇವಲ ತಪ್ಪು ಕಲ್ಪನೆಯಿಂದ ಆಗತಿರತವ. ಸಮಕ್ಷಮ ಎಲ್ಲ ವಿಷಯಗಳನ್ನು ಚರ್ಚಿಸಿ ದೂರ ಮಾಡಿಕೊಂಡರ ಇಂತಹ ಪ್ರಸಂಗ ಬರೋದಿಲ್ಲ. ಮತ್ತೆ ಇಷ್ಟಾಗಿ ಕೃಷ್ಣರಾಯ ಸಿಟ್ಟುಬಂದಾಗ ಇಷ್ಟು ಒದರ್‍ಯಾಡತಾನ ಹೊರತು ಆತಗ ಸರಿಯಾದ ಸಂಗತಿ ತಿಳಿದರ ಹಾಗ ಮಾಡೋದಿಲ್ಲ.

ಶ್ರೀ—ಅದೇನೋರಿ. ನಿಮಗ ಗೊತ್ತು ಅವರ ಮಾತು. ಇಲ್ಲಿ ನೋಡರಿ ಆಚಾರ. ಇಲ್ಲೇ ಎದರಿಗೆ ಕೂತಾರಲ್ಲ ಈ ನಿಮ್ಮ ರಾಮಣ್ಣ. ಈತನ್ನ ಕೇಳರಿ. ಆ ರಾಮಪೂರದ ಚನ್ನನ ವಿರುದ್ಧ ಕಾರಸ್ಥಾನ ಯಾಕ ನಡದsದ? ನನ್ನ ವ್ಯಾಲೆ ಸಿಟ್ಟಿದ್ದರ ನನಗ ದಂಡಿಸಲಿ.

ವೆಂ—ಇಲ್ಲಿ ನೋಡು, ನಿನ್ನ ವ್ಯಾಲೆ ನಿಸ್ಸೀಮ ಪ್ರೇಮವಿರೋದರಿಂದ ನಿನಗ ದಂಡಿಸೋದಿಲ್ಲ. ನಿನಗ ಯಾರು ಕೆಡಸತಾರಂತ ಅನುಮಾನ ಬರ ತದೋ ಅವರನ್ನೆಲ್ಲ ದಂಡಿಸೋದಕ್ಕ ಹೋಗತದ ಆ ಮನಸ್ಸು.

ಶ್ರೀ—ಇದೇನು ಪ್ರೇಮನೋ? ಅದೆಂಥ ಮನಸೋ? ನೀವೆ ಅರ್ಥ ಮಾಡಬೇಕು.

ವೆಂ—ಒಳ್ಳೇದು ರಾಮಣ್ಣ. ಚೆನ್ನನ ಸುದ್ದಿಏನು?

ರಾಮ—ಸುದ್ದಿ ಏನೂ ಇಲ್ಲ. ಆವನಿಗೆ ಕೌಲಿಗೆಕೊಟ್ಟ ರಾಮದೇವರ ಹೊಲಾ ಮತ್ತು ಇನ್ನೊಂದು ಸೀನಣ್ಣನ ಹೊಲಾ ಈ ಸಾರೆ ಎರಡನೆ ಯವರಿಗೆ ಕೊಡಬೇಕೂ ಅಂತ. ಯಾಕಂದರ ಅವ ಸಾಗೋಳಿ ರಕಮು ಸರಿಯಾಗಿ ಕೊಡವಲ್ಲ. ಮತ್ತ ಹೊಲಕ್ಕ ಬದಕೂ ಮಾಡ ವಲ್ಲ. ಆದಕ ರಾಯರು ಅವಗ ಹೋದವರ್ಷನ ಹ್ಯೇಳಿಬಿಟ್ಟಾರ.

ವೆಂ—ಇಷ್ಟೇ ಹೌದಲ್ಲೋ? ನಾವು ಕೃಷ್ಣರಾಯಗ ಹೇಳಿ ಹೊಲಾ ಅವನಿಗೇ ಕೊಡೋಹಾಂಗ ಮಾಡೋಣಂತ.

ಸು—ಅದು ಬಹಳ ಸ್ವಾರಸ್ಯ ಅದರೀ ಆಚಾರ್‍ರ.

ವೆಂ—ಅದಕ್ಕೆ ಹೇಳು ಗಟ್ಟಿಯಾಗಿ.

ಸು—ನೂಲೋಲ್ಯಾಕs ಚನ್ನೀ.

ರಾಟಲಿಲ್ಲೋ ಜಾಣ, ರಾಟಿಲಿಲ್ಲೋ ಜಾಣ.

ಮನಿಯಾಗಿನ ಬಂಡಿ ಮುರಿಸಿ, ಮನಿಯಾಗಿನ ಬಂಡಿ ಮುರಿಸಿ

ರಾಟಲ ಮಾಡಿಸಿಕೊಟ್ಟ, ರಾಟಲ ಮಾಡಿಸಿಕೊಟ್ಟ. ||೧||

ನೂಲೋಲ್ಯಾಕs ಚನ್ನೀ. ನೂಲೋಲ್ಯಾಕs ಚನ್ನೀ.

ಕದರು ಇಲ್ಲೋ ಜಾಣ ಕದರು ಇಲ್ಲೋ ಜಾಣ.

(ರಾಧಾಬಾಯಿ ಒಳಗೆ ಹೋಗುವಳು.)

ಕೈಯಾಗಿನ ಗುದ್ದಲಿ ಮುರಿಸಿ, ಕೈಯಾಗಿನ ಗುದ್ದಲಿ ಮುರಿಸಿ

ಕದರು ಮಾಡಿಸಿಕೊಟ್ಟ, ಕದರು ಮಾಡಿಸಿಕೊಟ್ಟ ||೨||

ನೂಲೋಲ್ಯಾಕs ಚನ್ನೀ. ನೂಲೋಲ್ಯಾಕs ಚನ್ನೀ.

(ನೇಪಥ್ಯದ ಕಡೆಗೆ ನೋಡಿ, "ಅಯ್ಯಯ್ಯ ತಾಯ" ಎಂದು ಒಳಗೆ ಓಡಿಹೋಗುವಳು.)

ವೆಂ—ಯಾಕಮ್ಮ?

(ಶ್ರೀನಿವಾಸನ ಪ್ರವೇಶ)

ಶ್ರೀ—ಸಾಷ್ಟಾಂಗ ನಮಸ್ಕಾರ ಆಚಾರ್ಯರಿಗೆ.

ವೆಂ—ದೀರ್ಘಾಯುಷ್ಯಮಸ್ತು, ಬಾರಣ್ಣ. ನಿನ್ನದೇ ಧ್ಯಾನ ನಡದದ ಇಲ್ಲಿ. (ಎದ್ದು ನಿಂತು) ರಾಧಕ್ಕ, ರಾಧಕ್ಕ, ಬಾರಮ್ಮ ಹೊರಗ. ಯಾರ ಬಂದಾರ ನೋಡು ಇಲ್ಲಿ.

ರಾಧಾ—ಪ್ರವೇಶಿಸಿ) ಯಾರು. ಅಯ್ಯ ಸೀನನs (ದುಃಖಪೂರಿತ ದನಿಯಲ್ಲಿ) ಬಂದ್ಯಾ ಹಡೆದಪ್ಪ. ಎಷ್ಟ ಸೊರಗ್ಯಾನ. (ಶ್ರೀನಿವಾಸ ನಮಸ್ಕರಿಸುವನು.) ನಮಸ್ಕರಿಸುವನು.) ಆಯುಷ್ಯವಂತನಾಗು. ಭಾಗ್ಯವಂತನಾಗು. ಭಡಾನ ಗಂಡಸಮಗನ ತಂದೆ ಆಗು. ಎಷ್ಟ ಸೊರಗೀದಿ. ಕೂಡು, ಕೂಡ್ರಿ ಆಚಾರ.

ವೆಂ—ಏನಮ್ಮ. ನಾನು ಹೇಳಿದ್ದನೋ ಇಲ್ಲೋ, ಸೀನಣ್ಣ ನಿನ್ನ ಭೆಟ್ಟಿಗೆ ಬರತಾನಂತ.

ಶ್ರೀ—ಅದು ಹೀಗಾತು. ನಿನ್ನೆ ರಾತ್ರಿ ಬಹಳ ಹೊತ್ತಾಗಿ ಊರಿಗೆ ಬಂದೆ. ಬೆಳಿಗ್ಗೆ ಎದ್ದಕೂಡಲೇ ರಾಮಪುರಕ್ಕೆ ಹೋಗಬೇಕಾತು. ಮಧ್ಯಾಹ್ನ ಬರೋದರೊಳಗ ನೀಲಕಂಠರಾವ ಮಾಮಾನ ಮನಿಯೊಳಗ ನಾಮ ಕರಣದ ಊಟ ಆತ್ಯು. ಈಗ ಇತ್ತ ಕಡೇನ ಬಂದೆ.

ರಾಧಾ—ಒಳ್ಳೇದು. ನೀವಿಬ್ಬರು ಕೂತಿರ್ರಿ. ನಾನೀಗ ಬರತೀನಿ. (ಒಳಗೆ ಹೋಗುವಳು.)

ವೆಂ—ಕೃಷ್ಣರಾಯರನ್ನ ಕಂಡಿದ್ದೇನು ದಾರಿಯಲ್ಲಿ ಅಂಗಡಿಯೊಳಗ?

ಶ್ರೀ—ಶಿವಲಿಂಗಪ್ಪನ ಅಂಗಡಿಯಲ್ಲಿ ಕುಳಿತಹಾಗಿತ್ತು. ಜಾತ್ರೆಯ ಪಟ್ಟಿ ನಡದಂತೆ ತೋರಿತು.

ವೆಂ—ಹೌದು ಸೀನಣ್ಣ. ಜಾತ್ರಿ ತೀರ ಸಮೀಪ ಬಂದದ ಪಾಪ! ಕೃಷ್ಣ ರಾಯ ಹಗಲೂ ರಾತ್ರಿ ದುಡೀತಿದ್ದಾನ. ಆತನಲ್ಲಿರೋ ಕಾರ್ಯ ನಿರ್ವಾಹಕ ಶಕ್ತಿಯನ್ನ ಯಾರಾದರೂ ಮೆಚ್ಚತಕ್ಕದ್ದೇ. ಮನೆ ಯಲ್ಲಿ ದುಡಿಯುವಾತ ಒಂಟಿಗನಾಗಿದ್ದರೂ, ಇಂಥ ಸಾರ್ವಜನಿಕ ಕಾರ್ಯಗಳಲ್ಲಿಯೂ ಆಸಕ್ತಿಯಿಂದ ತೊಡಗಿರತಾನ. ಊರ ಜನರಲ್ಲಿ ಅಗ್ರಗಣ್ಯನಾಗಿದ್ದು, ಸರಕಾರಿ ಅಧಿಕಾರಿಗಳಲ್ಲಿ ಮಾನ್ಯತೆ ಪಡೆದು, ಎಲ್ಲರಿಗೂ ಬೇಕಾದವನಾಗಿ ಇದ್ದು ಕೊಂಡಿರುವುದೂ ಒಂದು ವಿಧದಲ್ಲಿ ಚಾತುರ್ಯವೇ ಸರಿ.

ಶ್ರೀನಿ—ಅದರಲ್ಲಿ ಸಂಶಯವೇನಿದೆ ಸ್ವಾಮಿ? ಆ ಚಾತುರ್ಯಾನ ನಿಮ್ಮಂ ಥವರು—ಅವರ ಗೆಳೆಯರು—ಕಂಡು ಹಿಡಿದು ಮೆಚ್ಚೋದೂ ಉಚಿ ತನೇ ಅನ್ನಿರಿ. ಇಷ್ಟೆಲ್ಲ ಇದ್ದರೂ ಬಹುಶಃ ಮಾವಯ್ಯನ ಮನಸ್ಸಿಗೆ ಶಾಂತಿ ಸಮಾಧಾನ ಇಲ್ಲವೆಂದೇ ನನ್ನ ಗ್ರಹಿಕೆ. ನಿಮಗೆ ಹ್ಯಾಗೆ ಅನಿಸತದೋ ನಾನರಿಯೆ.

ವೆಂ—ನನ್ನ ಅನಿಸಿಕೆ ಕೂಡ ಅಷ್ಟೇನು ಬ್ಯಾರೆ ಆಗಿಲ್ಲ ಅನ್ನು. ಮನಸ್ಸಿಗೆ ಶಾಂತಿ, ಸಮಾಧಾನ, ತೃಪ್ತಿ ದೊರೆಯುವುದು ನಿಷ್ಕಾಮ ವೃತ್ತಿಯಿಂದ.

ಅದು ಸಾಮಾನ್ಯರೆಲ್ಲರಿಗೂ ದುರ್ಲಭವೆಂದು ನಾವು ಹೇಳಬಹುದಾದರೂ ಒಂದು ಬಗೆಯ ಸತತ ಪ್ರಯತ್ನದಿಂದ ಅದನ್ನು ಸಾಧಿಸಬಹುದು.

ಶ್ರೀ—ಅದು ಹೇಗೆ?

ವೆಂ—ಮನುಷ್ಯ ತಾನು ಮಾಡತಕ್ಕ ಕೆಲಸವನ್ನು ಅದು ಕರ್ತವ್ಯ ಅಂತ ತಿಳಿದು ಮಾಡಬೇಕಲ್ಲದೆ, ಅದರ ಫಲದ ಬಗ್ಗೆ ಕಾಳಜಿ ಮಾಡಬಾರದು. ಮತ್ತೆ ಆ ಫಲವೆಲ್ಲ ದೇವರಿಗೇ ಅರ್ಪಿಸಬೇಕು. ಇದಕ್ಕೆ ಕರ್ಮ ಫಲಾರ್ಪಣೆ ಎಂದು ಹೇಳುತ್ತಾರೆ. ಇದರಿಂದ ನಿಷ್ಕಾಮ ವೃತ್ತಿ ಬೆಳೆಯುವದಲ್ಲದೆ ಮನಸ್ಸಿಗೆ ಇಲ್ಲದ ಮೋಹ ಅಂಟಿ ಕೊಳ್ಳುವುದಿಲ್ಲ ಇದರ ಜೊತೆಗೆ ಕೀರ್ತಿಯ ಆಶೆ ಕೂಡ ಅಳಿಯಬೇಕು ಎಂದು ತಿಳಿದವರು ಹೇಳತಾರ. ಆಗಲೇ ಶಾಂತಿಯ ದಾರಿ ದೊರಕೀತು.

ಶ್ರೀ—ತಾವು ಹೇಳುವುದು ನನಗೆ ಸಂಪೂರ್ಣ ಅರ್ಥವಾಗಲಿಲ್ಲ. ಒಬ್ಬ ಮನುಷ್ಯ ತನ್ನ ಕುಟುಂಬವನ್ನು, ಲೌಕಿಕ ವ್ಯವಹಾರವನ್ನು ನೀವು ಹೇಳುವ ಹಾಗೆ ಚಾತುರ್ಯದಿಂದ ನಡೆಯಿಸಿಕೊಂಡು ಹೋಗುವವನಾಗಿದ್ದು ತದ್ವಾರಾ ಜನರಲ್ಲಿ, ಸರಕಾರದಲ್ಲಿ ಗೌರವ ಮನ್ನಣೆ ಪಡೆದುಕೊಂಡಿದ್ದರೆ ಅಂಥಾತನಿಗೆ ಶಾಂತಿ ದೊರಕುವುದಿಲ್ಲವೆಂದು ನಿಮ್ಮ ಅಭಿಪ್ರಾಯವೇ ಹೇಗೆ? ನೀವು ಹೇಳಿದ ತತ್ವವನ್ನು ಇಂಥಾ ವ್ಯಕ್ತಿಗೆ ಅನ್ವಯಿಸುವಾಗ ನಿಷ್ಪಕ್ಷಪಾತ ದೃಷ್ಟಿ ಬೇಕು ಅಂಬೋದನ್ನ ನಾನು ಬ್ಯಾರೆ ಹೇಳಬೇಕಾಗಿಲ್ಲ.

ವೆಂ—ಸೀನಣ್ಣ! ನಾನು ಹೇಳಿದ್ದು ಸುಮಾರಾಗಿ ಸ್ಪಷ್ಟವಾಗಿಯೇ ಹೇಳೀನಿ. ಪಕ್ಷಪಾತವೂ ಮನುಷ್ಯನ ಸ್ವಾರ್ಥದ ಒಂದು ಅಂಶ. ಇದು ನೋಡು ಕೃಷ್ಣರಾಯ ನನ್ನ ಬಾಲ್ಯ ಸ್ನೇಹಿತ. ಆತನ ಮನಸ್ಸಿಗೆ ಶಾಂತಿ ಇಲ್ಲವೆಂಬ ಕನಿಕರ ನನಗ ಇದ್ದರೆ ಅದು ಪಕ್ಷಪಾತವೇನಲ್ಲ. ಇವೊತ್ತೇ ಆ ಮಾತು ಆತನ ಬಾಯಿಂದಲೇ ಬಂತು. ಮನಃಶಾಂತಿಗಾಗಿ ನವಗ್ರಹ ಜಪಾನೂ ಮಾಡಿಸಬೇಕು ಅಂತ ನಾವು ಮಾತಾಡಿಕೊಂಡೇವಿ ಕೂಡ.

ಶ್ರೀ—ಕ್ಷಮಿಸಬೇಕು ಆಚಾರ! ತಾವು ಹಿರಿಯರು. ತಮ್ಮೆದುರಿಗೆ ಉದ್ಧುದ್ಧ ಮಾತಾಡುವುದು ಅವಿನಯವೆಂದು ತಾವು ಭಾವಿಸದೆ ಇದ್ದರೆ ಒಂದು ಮಾತು ಹೇಳತೀನಿ.

ವೆಂ—ಅವಶ್ಯ ಹೇಳಪ್ಪ. ನನಗ ಇಂತಹ ಮಾತು ಉದ್ದವೇ ಆಗಿರಲಿ, ಬೇಕು.

ಶ್ರೀ—ಈ ನವಗ್ರಹ ಪೂಜೆಯಿಂದ ಯಾರಿಗೇ ಆಗಲಿ ಮನಃಶಾಂತಿ ದೊರಕಲಾರದೆಂದೇ ನನ್ನ ಮತ. ಶಾಂತಿಯನ್ನು ಪಡೆಯುವುದು ಮನಸ್ಸಿನಲ್ಲಿ—ನಮ್ಮ ಹೃದಯದಲ್ಲಿ. ಮನುಷ್ಯನ ಅಂತರ್ಬಾಹ್ಯ ಆಚಾರ ವಿಚಾರಗಳ ನಿರ್ವಹಣೆಯಲ್ಲಿ ವಿವೇಕವೊಂದೇ ಪ್ರಾಮಾಣಿಕವಾದ ಸಾಕ್ಷಿ. ಅದರ ಜೊತೆಗೆ ಪರಮಾತ್ಮನೂ ಒಬ್ಬ ಸಾಕ್ಷಿ ಅಂತ ನೀವು ಹೇಳಬಹುದು ಬೇಕಾದರ ವಿವೇಕ, ಮನಸ್ಸು ಬೇರೆ ಬೇರೆ ದಾರಿಗೆ ಎಳೆದಾಗ, ಮನುಷ್ಯ ಒಳಗೊಂದು ಹೊರಗೊಂದು ಬಗೆದು ಹೇಗಾದರೇನು ಕೀರ್ತಿ, ಆಖ್ಯಾತಿ, ಧನ ಬಂದರೆ ಸಾಕು ಅಂತ ಹೊರಟನಿಂದ್ರುತಾನ. ಆಗ ಆ ವಿವೇಕ ಮನಸ್ಸನ್ನು ಸದಾ ಚುಚ್ಚಿ ಚುಚ್ಚಿ ಅಶಾಂತಿಯನ್ನೆಬ್ಬಿಸುತ್ತವೆ. ಅದರ ಜೊತೆಗೆ ಹೊರಗಿನ ಪರಿಸ್ಥಿತಿಯೂ ಈ ಅಶಾಂತಿಗೆ ಪೋಷಕವಾಗುವ ಹಾಗೆ ಬೆಳೆಯುವುದೂ ಉಂಟು. ಇಂಥ ಅಶಾಂತಿ ಅನೇಕ ಬಗೆಯಲ್ಲಿ ಬರಬಹುದು. ಅವೆಲ್ಲಕ್ಕೂ ಮದ್ದು ಒಂದು. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ವಿವೇಕಕ್ಕೆ ಮೊರೆಹೋಗುವುದು. ಅದಕ್ಕೆ ದುರಭಿಮಾನ, ಸ್ವಾರ್ಥ, ಇವು ದೊಡ್ಡ ಗ್ರಹಗಳು. ಅವನ್ನು ಅಳಿಸದೇ ಯಾವ ನವಗ್ರಹ ಪೂಜೆ ಮಾಡಿದರೂ ಏನೂ ಉಪಯೋಗವಾಗಲಿಕ್ಕಿಲ್ಲ.

ವೆಂ—ನೀನು ಹೇಳೋದು ಸರಿ ಅನ್ನು. ಆದರ ನವಗ್ರಹ ಪೂಜೆಯ ವಿಷಯ ಹೀಂಗದ. ಮನುಷ್ಯನ ಕಾರ್ಯಪ್ರವೃತ್ತಿಗೆ ಆತನ ಗ್ರಹಗತಿಯೂ ಕಾರಣವಾಗಿರುವುದರಿಂದ ಕೆಲವೊಂದು ದುಷ್ಟ ಗ್ರಹಗಳ ಪರಿಣಾಮದ ಶಮನಕ್ಕಾಗಿ, ಕೆಲವೊಂದು ಪೂಜಾ ಜಪ ಮುಂತಾದ್ದನ್ನು ನಮ್ಮ ಜ್ಯೋತಿಷ್ಯ ಶಾಸ್ತ್ರ ಹಾಕಿಕೊಟ್ಟದ. ಹಾಗೆ ಮಾಡು

ಶ್ರೀ—ನೀವು ಹೇಳೋದು ನನಗ ಹದಿನಾರಾಣಿ ಮನಸ್ಸಿಗೆ ಬಂದದ. ಮತ್ತೆ ಸುಮಾರು ಒಂದು ವರ್ಷದ ತನಕ ಅದರ ಪ್ರಯೋಗಾನೂ ನಡೆಸಿದೆ ನೆಲ್ಲ? ನೋಡಿರಿ ಈಗ ರಾಮಪುರದಲ್ಲಿರೋ ಪರಿಸ್ಥಿತಿಯನ್ನ ಲಕ್ಷಿಸಿದರ, ನಾನು ಊರಿಂದ ಎಷ್ಟು ದೂರಾಗಿದ್ದೇನೋ ಅಷ್ಟು ಊರಿಗೆ ಹಿತವಾದೀತು. ನನ್ನ ಇರವಿನಿಂದ ಊರ ಜನರಿಗೆ ದಿನಕ್ಕೊಂದು ಬಗೆಯಿಂದ ತೊಂದರೆಗಳು ಬಂದಾವ ಹೊರತು ಸುರಕ್ಷಿತ ಇಲ್ಲ.

(ರಾಮಣ್ಣನ ಪ್ರವೇಶ)

ರಾಮಣ್ಣ—ನಮಸ್ಕಾರ ಯಂಕಣ್ಣಾಚಾರ! ಓಹೋ! ಸೀನಣ್ಣ ಮನಿಗೇ ಬಂದಾರಲ್ಲ! ಬಹಳ ನೆಟ್ಟಗಾಯಿತು. ಸುಮ್ಮಕ್ಕನ ಕಡಿಂದ ನಮಗಿವತ್ತು ಮಿಠಾಯಿ ಸಿಗತಾವ.

ವೆಂ—ನಿನಗೇನಪ್ಪ. ಯಾವಾಗಲೂ ಕೈ ತುಪ್ಪದಲ್ಲಿಯೇ!

ರಾಮ—ಅದು ನಿಮ್ಮ ಆಶೀರ್ವಾದರೀ. ನಿಮ್ಮ ಅನುಗ್ರಹದಿಂದ ದೇವರು ಕಡೇ ತನಕ ಇಷ್ಟು ನಡಸಿ ಬಿಟ್ಟಾಂದರ, ನೀವು ನಂಬರಿ ಬಿಡರಿ ನಾನು ಗೆದ್ದು ಬಿಟ್ಟೆ. ಅಂಞ, ಸೀನಣ್ಣ ಏನೋ ಅಂತಿದ್ರು. ಊರ ಜನರಿಗೆ ಸುರಕ್ಷಿತ ಇಲ್ಲ ಅಂತ. ನೀವು ನಂಬರಿ ಬಿಡರಿ ಆಚಾರ, ನಮ್ಮ ಸೀನಣ್ಣಗ, ತಮ್ಮೂರು, ತಮ್ಮೂರು ಜನರು ಅಂದರ ಬಲು ಪ್ರೇಮ. ಅಲ್ಲ ನೋಡರಿ. ನಿನ್ನೆ ರಾತ್ರಿ ಬಂದಾರ. ಬೆಳಗಾಗೋದರೊಳಗೆ ರಾಮಪೂರಕ್ಕ ಹೋಗಿಬಿಟ್ಟರು. ಪಾಪ! ಊರ ಜನರಿಗೆ ಸುಸಕ್ಷಿತ ಇಲ್ಲ ಅಂದ್ರೆಲ್ಲ. ಯಾಕರೀ ಸೀನಣ್ಣ?

ಶ್ರೀ—ನಾನು ಬಂದೀನಿ ಅಂತ.

ರಾಮ—ಅಯ್ಯೋ! ಹೀಂಗ್ಯಾಕ ಅಂತೀರಿ?

ಶ್ರೀ—ಅಸ್ನೋ ಹಾಂಗ ಮಾಡತೀರಿ ನೀವೆಲ್ಲ. ಮತ್ತೆ ಅಂದರ ಯಾಕ ಅಂತೀದಿ ಅಂತ ಕೇಳಿದರ ಏನ ಹೇಳಬೇಕಪ್ಪ?

ರಾಮ—ನೀವು ನಂಬರಿ ಬಿಡರಿ. ನೀವು ಅಂದದ್ದು ನನಗ ತಿಳೀಲಿಲ್ಲ. ನಾನಂತೂ ಹಾಂಗ ಅಂದಿಲ್ಲ. ರಾಮ ರಾಮ! ನೀವು ಬರಬೇಕು, ನಮ್ಮ ಸುಮ್ಮಕ್ಕನ ಪ್ರಸ್ತ ಭಡಾನೇ ಆಗಬೇಕೂ ಅಂತ ಚಾತಕ ಪಕ್ಷೀ ಹಾಂಗ ನಿಮ್ಮ ಹಾದೀನೇ ನೋಡತಿದ್ದೆ.

ಶ್ರೀ—ನೀವು ಹೇಳೋದು ನನಗ ಹದಿನಾರಾಣಿ ಮನಸ್ಸಿಗೆ ಬಂದದ. ಮತ್ತೆ ಸುಮಾರು ಒಂದು ವರ್ಷದ ತನಕ ಅದರ ಪ್ರಯೋಗಾನೂ ನಡೆಸಿದೆ ನೆಲ್ಲ? ನೋಡಿರಿ ಈಗ ರಾಮಪುರದಲ್ಲಿರೋ ಪರಿಸ್ಥಿತಿಯನ್ನ ಲಕ್ಷಿಸಿದರ, ನಾನು ಊರಿಂದ ಎಷ್ಟು ದೂರಾಗಿದ್ದೇನೋ ಅಷ್ಟು ಊರಿಗೆ ಹಿತವಾದೀತು. ನನ್ನ ಇರವಿನಿಂದ ಊರ ಜನರಿಗೆ ದಿನಕ್ಕೊಂದು ಬಗೆಯಿಂದ ತೊಂದರೆಗಳು ಬಂದಾವ ಹೊರತು ಸುರಕ್ಷಿತ ಇಲ್ಲ.

(ರಾಮಣ್ಣನ ಪ್ರವೇಶ)

ರಾಮಣ್ಣ—ನಮಸ್ಕಾರ ಯಂಕಣ್ಣಾಚಾರ! ಓಹೋ! ಸೀನಣ್ಣ ಮನಿಗೇ ಬಂದಾರಲ್ಲ! ಬಹಳ ನೆಟ್ಟಗಾಯಿತು. ಸುಮ್ಮಕ್ಕನ ಕಡಿಂದ ನಮಗಿವತ್ತು ಮಿಠಾಯಿ ಸಿಗತಾವ.

ವೆಂ—ನಿನಗೇನಪ್ಪ. ಯಾವಾಗಲೂ ಕೈ ತುಪ್ಪದಲ್ಲಿಯೇ!

ರಾಮ—ಅದು ನಿಮ್ಮ ಆಶೀರ್ವಾದರೀ. ನಿಮ್ಮ ಅನುಗ್ರಹದಿಂದ ದೇವರು ಕಡೇ ತನಕ ಇಷ್ಟು ನಡಸಿ ಬಿಟ್ಟಾಂದರ, ನೀವು ನಂಬರಿ ಬಿಡರಿ ನಾನು ಗೆದ್ದು ಬಿಟ್ಟೆ. ಆಂs, ಸೀನಣ್ಣ ಏನೋ ಅಂತಿದ್ರು. ಊರ ಜನರಿಗೆ ಸುರಕ್ಷಿತ ಇಲ್ಲ ಅಂತ. ನೀವು ನಂಬರಿ ಬಿಡರಿ ಆಚಾರ, ನಮ್ಮ ಸೀನಣ್ಣಾಗ, ತಮ್ಮೂರು, ತಮ್ಮೂರು ಜನರು ಅಂದರ ಬಲು ಪ್ರೇಮ. ಅಲ್ಲ ನೋಡರಿ. ನಿನ್ನೆ ರಾತ್ರಿ ಬಂದಾರ. ಬೆಳಗಾಗೋದರೊಳಗೆ ರಾಮಪೂರಕ್ಕ ಹೋಗಿಬಿಟ್ಟರು. ಪಾಪ! ಊರ ಜನರಿಗೆ ಸುಸಕ್ಷಿತ ಇಲ್ಲ ಅಂದ್ರೆಲ್ಲ. ಯಾಕರೀ ಸೀನಣ್ಣ?

ಶ್ರೀ—ನಾನು ಬಂದೀನಿ ಅಂತ.

ರಾಮ—ಅಯ್ಯೋ! ಹೀಂಗ್ಯಾಕ ಅಂತೀರಿ?

ಶ್ರೀ—ಅನ್ನೋ ಹಾಂಗ ಮಾಡತೀರಿ ನೀವೆಲ್ಲ. ಮತ್ತೆ ಅಂದರ ಯಾಕ ಅಂತೀದಿ ಅಂತ ಕೇಳಿದರ ಏನ ಹೇಳಬೇಕಪ್ಪ?

ರಾಮ—ನೀವು ನಂಬರಿ ಬಿಡರಿ. ನೀವು ಅಂದದ್ದು ನನಗ ತಿಳೀಲಿಲ್ಲ. ನಾನಂತೂ ಹಾಂಗ ಅಂದಿಲ್ಲ. ರಾಮ ರಾಮ! ನೀವು ಬರಬೇಕು, ನಮ್ಮ ಸುಮ್ಮಕ್ಕನ ಪ್ರಸ್ತ ಭಡಾನೇ ಆಗಬೇಕೂ ಅಂತ ಚಾತಕ ಪಕ್ಷೀ ಹಾಂಗ ನಿಮ್ಮ ಹಾದೀನೇ ನೋಡತಿದ್ದೆ.

ಶ್ರೀ—ನಾನೂ ಅದೇ ಅಂತೀನಿ. ನಿನಗ ಸಂತೋಷವಾಗುವಂಥ ಪ್ರಯೋಜನಕ್ಕ 'ಸೀನಣ್ಣ' ಬೇಕಾಗೇನ್ಸ ಹೊರತು ರಾಮಪುರದ ಜನರ ಸುಖಕ್ಕಾಗಿ ಅವನೇನು ಬೇಕಿಲ್ಲ ಹೌದಲ್ಲೋ?

ರಾಮು—ಹಿಹಿಹಿಹಿ! ಸೀನಣ್ಣ, ನೀವು ನಂಬರಿ ಬಿಡರಿ. ನಿಮ್ಮ ಸಂಗಡ ಮಾತಾಡೋದು ಹ್ಯಾಂಗಾದೀತು?

ಶ್ರೀ—ಹ್ಯಾಂಗ ಆದೀತಪ್ಪ ರಾಮಣ್ಣ! ಹುರುಡು ಬಯಲಿಗೆ ಬರೋ ಮಾತು ಆಡ ಬೇಕಂದರ ಯಾರ ಕಡಿಂದನೂ ಆಗೋದಿಲ್ಲ.

ರಾಧಾ—(ಪ್ರವೇಶಿಸಿ) ನೀನು ಯಾವಾಗ ಬಂದೆ ರಾಮಣ್ಣ? ಅಲ್ಲಪ್ಪ ಕಟ್ಟೆಗಿ ಕಡಿಸಬೇಕಾಗಿತ್ತು. ರಾಮುಪುರದ ಆ ಬ್ಯಾಗಾರಿಗೆ ಹೇಳಿ ಬಂದ್ಯೋ ಇಲ್ಲೋ? ನಿನ್ನ ಕಛೇರಿ ಕಟ್ಟೆ ಕೆಲಸದಾಗ ಮರತೇ ಬಿಡತೀದಿ.

ರಾಮು—ಇಲ್ಲ ಅಕ್ಕ, ಮುಂಜಾನೆ ಹೋಗಿ ಹೇಳಿ ಬಂದೀನಿ, ನಾಳಿಗೆ ಬರತಾರ. ಮತ್ತೆ ಅದೇ ಸುದ್ದಿ ಹೇಳಿ ಹೋಗಬೇಕು ಅಂತ ಬಂದಿದ್ದೆ.

ರಾಧಾ—ಹೂಂ! ಆಗಲಿ. ಸುಮಿತ್ರಾ ಪಾನಕಾ ಮಾಡತಿದ್ದಾಳ. ನೋಸಿಗೊಂಡು ತಗೊಂಡು ಬಾ ಅಂತ ಹೇಳು. (ರಾಮಣ್ಣನು ಒಳಗೆ ಹೋಗುವನು.)

ರಾಧಾ—ಹೂಂ! ಮತ್ತಿವ್ದರ, ಹೇಳಿದರೇನು ಆಚಾರ, ಸೀನಪ್ಪಗ?

ಶ್ರೀ—ಏನು?

ವೆಂ—ಇನ್ನೂ ಹೇಳಿಲ್ಲಮ್ಮ. ಅವಸರ ಯಾಕ? ಹೇಳಾಣಂತ.

ಶ್ರೀ—ಏನ್ರಿ ಸ್ವಾಮಿ. ಮತ್ತೇನು ಸುದ್ದಿ?

ವೆಂ—ಏನಿಲ್ಲ. ನಿನ್ನ ಮ್ಯಾಲೆ ಕೃಷ್ಣರಾಯಂದು ಬಾಲ್ಯದಿಂದಲೂ ಬಹಳ ಪ್ರೇಮ. ನೀನು ದೊಡ್ಡವನಾದ ಹಾಗೆಲ್ಲ ಅದು ಬೆಳೆದುಕೊಂಡೇ ಬಂದದ. ನೀನು ಅಲ್ಲೇ ಇಲ್ಲೆ ಹೋಗಿ ಕೆಲಸ ಮಾಡಿಕೊಂಡು ಇರೋದಕ್ಕಿಂತ ಇಲ್ಲಿಯೇ ಇರಬೇಕೂ ಅಂತ ಆತನ ಮನದಾಶೆ. ಅದನ್ನ ಸಾಧಿಸೋದಕ್ಕ ಯಾವ ವಿಧವಾದ ಪ್ರಯತ್ನ ಮಾಡೋ

ವಕ್ಕೊ ಆತ ಹಿಂದೆ ಮುಂವೆ ನೋಡೋದಿಲ್ಲ. ಆತನ ಮನಸ್ಸಿನ ಅಶಾಂತಿಗೆ ಇದೇ ಮುಖ್ಯ ಕಾರಣ. ಅದರ ಶಮನಕ್ಕಾಗಿ ನಿನ್ನ ಸಹಕಾರ ಬೇಕೆಂಬೋ ಮಾತನ್ನು ನಿನಗೆ ತಿಳಿಸಬೇಕೂ ಅಂತ ರಾಧಕ್ಕನ ಬಯಕೆ.

ಶ್ರೀ—ನಾನಾಗಲೇ ನಿಮ್ಮ ಮುಂದ ಹೇಳಿದೆನಲ್ಲ! ನಾನು ಇಲ್ಲಿ ಇರೋದ ರಿಂದ ಅಶಾಂತಿ ಇನ್ನೂ ಹೆಚ್ಚೀತೇ ವಿನಾ ಕಡಮೆಯಾಗಲಿಕ್ಕಿಲ್ಲ. ಇದೇನು ಹೊಸ ಸುದ್ದಿ ಅಲ್ಲ. ಅತ್ತೆಮ್ಮಗೂ ಗೊತ್ತಿಲ್ಲದೆ ಇಲ್ಲ. ತಂದೆಂದರೂ ಆತನ ಮಾಪಂದರೂ ಆತನ, ನನಗ. ಆತನ ಸ್ವಭಾವ ನಿಮಗೆಲ್ಲ ಗೊತ್ತದ. ಆತನ ಈ ಸ್ವಭಾವದಿಂದ ಇದ್ದ ವ್ಯವಹಾರ ಅಡ್ಡ ಹಾದಿ ಹಿಡೀತ ಬಂದದ. ನಡುವ ಈ ಸಿದ್ದಲಿಂಗಪ್ಪ, ರಾಮಣ್ಣ ಬ್ಯಾರೆ ಅಂಬಾರಿ ಉಣ್ಣಿ ಇದ್ದಾಂಗ. ಅವರ ಮಾತ್ನ ಆತಗ ವೇದವಾಕ್ಯ. ಮತ್ತೆ ಆತ ಇವರ ಸಂಗಡಕೂಡಿ ತಾನೊಂದು ವಿಧವಲ್ಲಿ ನಡಸಿಕೊಂಡು ಹೋಗೋ ಕೆಲಸದಾಗೆಲ್ಲ ನನ್ನ ಮೂಲಕ ಊರವರಿಂದ ತೊಂದರೆ ಬಂದೇ ಬರತಾವ. ಇದು ಅನುಭವದ ಮಾತು. ಅದಕ್ಕ ಕಾರಣ ಇನ್ನೂ ಅನೇಕ ಅವ ಅಂತ ಅನ್ನರಿ. ಕೆಲವು ವರ್ಷ ನಾನು ಬ್ಯಾರೆ ಕಡೆ ಇರತೀನಿ. ಪರಿಸ್ಥಿತಿ ಸ್ವಲ್ಪ ಸ್ತಿಮಿತಕ್ಕ ಬಂದ ಮ್ಯಾಲೆ ನಾನು ಇಲ್ಲಿ ಬಂದಿರಬೇಕು ಅಂತ ಅನಿಸಿ ದರ ಬಂದೇ ಬರತೇನಲ್ಲ (ರಾಮಣ್ಣನು ಎರಡು ವಾಟಗಗಳಲ್ಲಿ ಪಾನಕವನ್ನು ತಂದು, ಶ್ರೀನಿವಾಸನ ಎದುರಿಗೊಂದು ಇಟ್ಟು ತಾನೊಂದು ತೆಗೆದುಕೊಂಡು ಕೂಡುವನು. ಇಬ್ಬರೂ ಕುಡಿಯ ಲುದ್ಯುಕ್ತರಾಗುವರು.)

ರಾಧಾ—ಒಬ್ಬರಿಗೊಬ್ಬರು ಸಂಬಾಳಿಸಿಕೊಂಡು ಹೋಗಬೇಕಾಗತದ. ಮಗಾ ಅಂದರೂ ನೀನೆ. ಅಳಿಯ ಅಂದರೂ ನೀನೆ. ಈಗ ಅವ ರಿಗೂ ಮೊದಲಿನ್ಹಾಂಗ ಕೆಲಸ ಮಾಡೋದು ಆಗೋದಿಲ್ಲ. ನೀನು ಇಲ್ಲೇ ಇದ್ದು ಅವರಿಗಿಷ್ಟು ನೆರವಾಗಬೇಕೂ ಅಂತೀವಿ ನಾವೆಲ್ಲ.

ಶ್ರೀ—(ಪಾನಕ ಕುಡಿದು ವಾಟಗವನ್ನು ಕೆಳಗಿಟ್ಟು ಬಾಯಿ ಒರೆಸಿಕೊಂಡು)

ಬೆಳತನಕ ರಾಮಾಯಣ ಕೇಳಿ ರಾಮಗ ಸೀತಾ ಏನ ಆಗ ಬೇಕಂತ ಕೇಳಿದರ ಏನ ಹೇಳತಾರ ?

ರಾಧಾ—ಮತ್ತ ಅಲ್ಲಪ್ಪ. ಹಂಗಾದರ ಅದs ರಾಮಾಯಣನs ಬೆಳೆಸಿ ಕೊತ್ತ ಕೂಡಬೇಕೇನು ? ನೀನ ಹೇಳು. ನಾನು ನಿನಗೂ ಹೇಳೀನಿ. ಅವರಿಗೂ ಹೇಳತೀನಿ ಸಂಬಾಳಿಸಿಕೊಂಡು ಇರಬೇಕು ಅಂತ.

ಶ್ರೀ—ಹಿಂದಕ್ಕ ನೀ ಹೇಳಿದ ಮಾತು ಎಷ್ಟು ಕೇಳ್ಯಾನೋ ಅಷ್ಟೇ ಮುಂದೂ ಕೇಳತಾನ.

ವೆಂ—ಸೀನಣ್ಣಾ, ನಾನು ಒಂದು ಮಾತು ಹೇಳಲೀ !

( ರಾಮಣ್ಣನು ಅಡಿಕೆ ಡಬ್ಬಿ ತೆಗೆದು ಶ್ರೀನಿವಾಸನಿಗೆ ಕೊಟ್ಟು ತಾನು ಹಾಕಿಕೊಳ್ಳುವನು )

ಶ್ರೀ—( ಅಡಿಕೆ ಕೈಯಲ್ಲಿ ಇಸಕೊಂಡು ) ಆಗಲಿ.

ವೆಂ—ರಾಮಪೂರದ ನಿನ್ನ ಹೊಲಾ, ತೋಟ ಪಟ್ಟೀ ವ್ಯವಸ್ಥೆನ್ನು, ಆ ಊರ ದೇಖರೇಖೀನ್ನು ನಿನಕಡೆ ಕೊಟ್ಟು, ಸಂಗಡ ಸಹಾಯಕ್ಕ ರಾಮಣ್ಣನ್ನ ಕೊಟ್ಟರ ಆಗದೇನು ? ಕೃಷ್ಣರಾಯ ತನ್ನ ಅಂಗಡಿ ವ್ಯವಹಾರದ ಕೆಲಸ ಏನೋ, ತಾನೇನೋ ? ಊರ ಹೆಸರಿಗೆ ಬರ ಲಾರದೆ ಇದ್ದರ ಆಯಿತಲ್ಲ.

ಶ್ರೀ—ಇವೆಲ್ಲ ಬಾಯಿಲೆಖ್ಖ.

ರಾಧಾ:—ಹಾಂಗ ಒಮ್ಮೆಲೆ ಉತಾವಳಿತನ ಮಾಡಬ್ಯಾಡ ಸೀನು. ಎಂಕಪ್ಪಾ ಚಾರು ಅವರಿಗೆ ತಿಳಿಸಿ ಹೇಳಿದರ ಹೂಂ ಅಂತಾರ. ಮಹರಾಯ ! ದಯಮಾಡಿ ನೀನಿಷ್ಟು ನಾನು ಹೇಳಿದ್ಹಾಂಗ ಕೇಳು. ಇಷ್ಟು ದಿನ ಮಾಡಿದ್ದೆಲ್ಲ ಹೊಳ್ಯಾಗ ಹುಣಿಸೆಣ್ಣು ತೊಳದ್ಹಾಂಗ ಮಾಡಿಸಬೇಡ. ಹುಡಿಗಿ ಮೈನೆರದು ವರ್ಷಾತು ಸೀನು ಹೋಗಿ ಹೈದರಾಬಾದಿ ನಾಗ ಕೂತಿ. ಪತ್ರ ಇಲ್ಲ. ಉತ್ತರ ಇಲ್ಲ. ಈಗ ಬಂದೀದಿ, ಅದು ಇದು ಅನ್ನಬ್ಯಾಡ, ನನಕಡಿಗೆ ನೋಡು. ಏನು ಬಂದರೂ ನುಂಗಿಕೊ.

ಶ್ರೀ:—ಅತ್ತೆವ್ನಾ, ನನ್ನತಲೆ ವ್ಯಾಲ ಕಲ್ಲುಹಾಕಿದರೂ ನಾನು ನುಂಗಿ ಕೊಳ್ಳೋದಕ್ಕ ತಯಾರಾಗೀನಿ. ನನ್ನ ದಶಿಂದ ಅವರಿಗೆ ಅಂಬೋದು, ನನ್ನ ವ್ಯಾಲಿನ ಸಿಟ್ಟಿನಿಂದ ರಾಮಪುರದ ಬ್ಯಾಗಾರ ವ್ಯಾಲೆ ಸಿಟ್ಟು ತೆಗೆಯೋದು-ಮಾಡವರ ನನ್ನ ಹೊಟ್ಟ್ಯಾಗಿನ ಕರಳು ಹೊರಗಬರತಾವ.

ವೆಂ—ಇವು ಕೇವಲ ತಪ್ಪು ಕಲ್ಪನೆಯಿಂದ ಆಗತಿರತವ. ಸಮಕ್ಷಮ ಎಲ್ಲ ವಿಷಯಗಳನ್ನು ಚರ್ಚಿಸಿ ದೂರ ಮಾಡಿಕೊಂಡರ ಇಂತಹ ಪ್ರಸಂಗ ಬರೋದಿಲ್ಲ. ಮತ್ತೆ ಇಷ್ಟ್ಯಾಗಿ ಕೃಷ್ಣರಾಯ ಸಿಟ್ಟುಬಂದಾಗ ಇಷ್ಟು ಒದರ್ಯಾಡತಾನ ಹೊರತು ಆತಗ ಸರಿಯಾದ ಸಂಗತಿ ತಿಳಿದರ ಹಾಗ ಮಾಡೋದಿಲ್ಲ.

ಶ್ರೀ—ಅದೇನೋರಿ. ನಿಮಗ ಗೊತ್ತು ಅವರ ಮಾತು. ಇಲ್ಲಿ ನೋಡರಿ ಆಚಾರ. ಇಲ್ಲೇ ಎದರಿಗೆ ಕೂತಾರಲ್ಲ ಈ ನಿವ್ಮಾ ರಾಮಣ್ಣಾ. ಈತನ್ನ ಕೇಳರಿ. ಆ ರಾಮಪೂರದ ಚನ್ನನ ವಿರುದ್ಧ ಕಾರಸ್ಥಾನ ಯಾಕ ನಡದ್ವದ? ನನ್ನ ವ್ಯಾಲೆ ಸಿಟ್ಟಿದ್ದರ ನನಗ ದಂಡಿಸಲಿ.

ವೆಂ—ಇಲ್ಲಿ ನೋಡು, ನಿನ್ನ ವ್ಯಾಲೆ ನಿಸ್ಸೀಮ ಪ್ರೇಮವಿರೋದರಿಂದ ನಿನಗ ದಂಡಿಸೋದಿಲ್ಲ. ನಿನಗ ಯಾರು ಕೆಡಸತಾರಂತ ಅನುಮಾನ ಬರ ತದೋ ಅವರನ್ನೆಲ್ಲ ದಂಡಿಸೋದಕ್ಕ ಹೋಗತದ ಆ ಮನಸ್ಸು.

ಶ್ರೀ—ಇದೇನು ಪ್ರೇಮನೋ? ಅದೆಂಥ ಮನಸೋ? ನೀವೆ ಅರ್ಥ ಮಾಡಬೇಕು.

ವೆಂ—ಒಳ್ಳೇದು ರಾಮಣ್ಣಾ. ಚೆನ್ನನ ಸುದ್ದಿ ಏನು?

ರಾಮ—ಸುದ್ದಿ ಏನೂ ಇಲ್ಲ. ಅವನಿಗೆ ಕೌಲಿಗೆಕೊಟ್ಟ ರಾಮದೇವರ ಹೊಲಾ ಮತ್ತು ಇನ್ನೊಂದು ಸೀನಣ್ಣನ ಹೊಲಾ ಈ ಸಾರೆ ಎರಡನೆ ಯವರಿಗೆ ಕೊಡಬೇಕೂ ಅಂತ. ಯಾಕಂದರ ಅವ ಸಾಗೋಳಿ ರಕಮು ಸರಿಯಾಗಿ ಕೊಡವಲ್ಲ. ಮತ್ತ ಹೊಲಕ್ಕ ಬದಕೂ ಮಾಡ ವಲ್ಲ. ಅದಕ ರಾಯರು ಅವಗ ಹೋದವರ್ಷನ ಹೇಳಿಬಿಟ್ಟಾರ.

ವೆಂ—ಇಷ್ಟೇ ಹೌದಲ್ಲೋ? ನಾವು ಕೃಷ್ಣರಾಯಗ ಹೇಳಿ ಹೊಲಾ ಅವನಿಗೇ ಕೊಡೋಹಾಂಗ ಮಾಡೋಣಂತ.

ಶ್ರೀ—ಆಚಾರ! ನೀವು ತಿಳಿದುಕೊಂಡಷ್ಟು ಸುಲಭಾಗಿಲ್ಲ ಅದು. ರಾಮು ದೇವರ ಹೊಲಾ ಅಂದರ ನೀವು ಅದನ್ನ ಯಾರದು ಅಂತ ತಿಳಕೊಂಡೀರಿ?

ವೆಂ—ರಾಮುದೇವರದೂ ಅಂತ.

ಶ್ರೀ—ಅದು ಹಾಗಿಲ್ಲ ಸ್ವಾಮಿ. ಆ ಹೊಲಾ ಚನ್ನಂದು ಪಟ್ಟೀದ್ದದ. ಅದನ್ನ ರಾಮುದೇವರು ತನ್ನ ಭಕ್ತರ ದ್ವಾರಾ ಎತ್ತಿಹಾಕೋ ಕಾರಸ್ಥಾನ ನಡಿಸ್ಯಾನ.

( ವೆಂಕಪ್ಪಾಚಾರ್ಯರು ರಾಮಣ್ಣನ ಕಡೆಗೆ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡುವರು. ರಾಮಣ್ಣನು ಕಣ್ಣು ತಪ್ಪಿಸುವನು )

ರಾಮು—ರಾಧಕ್ಕ, ಅಕ್ಕಿ ಹಳ್ಳ ಮಾಡಿಸೋದಕ್ಕ ಕೂಲಿಯವರಿಗೆ ಹೇಳು ಅಂತ ಅಂದಿದ್ರು ರಾಯರು. ಮತ್ತೆ ಎಷ್ಟು ಮುಂದೇಗೆಹೇಳಲಿ.

ರಾಧಕ್ಕ—ಇನ್ನ ಅಕ್ಕೀನೆ ಬಂದಿಲ್ಲ. ಬಂದಮ್ಯಾಲ ಹೇಳತೀನಿ.

ರಾಮು—ನಾನು ಹೋಗತೀನಿ ಹಂಗಾರ. ನಮಸ್ಕಾರ ಆಚಾರ.

( ಹೋಗುವನು )

ವೆಂ—ಒಳ್ಳೇದು, ಆದೇನೇನು ಅದನೊ. ಅದರ ವಿವರಗಳನ್ನೆಲ್ಲ ನಾನು ಕೃಷ್ಟರಾಯನ ಕಡಿಂದ ತಿಳಿದುಕೊಂಡು ಸರಿಪಡಿಸೋದಕ್ಕ ಪ್ರಯತ್ನಸತೀನಿ. ಮತ್ತೆ ನಿನ್ನ ಹೊಲವಂತೂ ಅವನಿಗೇ ಕೊಡೋದಕ್ಕ ನಾನು ಒತ್ತಾಯಪಡಸ್ತೀನಿ.

ಶ್ರೀ—ಆಗಲಿ. ನೀವಿಷ್ಟು ಅನುಗ್ರಹಮಾಡಿದರ ಬಡವನ ಉದ್ಧಾರ ಆದೀತು. ರಾಮುದೇವರು ನಿಮ್ಮ ಹೃದಯದೊಳಗ ನಿಂತು ಮಾಡ ತಾನಂತ ನಾನು ತಿಳಕೊಂಡೀನಿ. ಯಾಕಂದರ ಅವಂದು ದೊಡ್ಡ ಕುಟುಂಬ. ನಮ್ಮ ಹೊಲಾ ಮತ್ತ ಅವಂದೊಂದು, ಇವೆರಡು ಬಿಟ್ಟರ ಬ್ಯಾರೆ ಹೊಲಾನ ಇಲ್ಲ. ಬಹುಶಃ ಅವಾ ನಾಳೆ ಇಲ್ಲಿಗೆ ಬರತಾನ. ನೀವು ಸ್ವಲ್ಪ ಅಂತಃಕರಣ ಮಾಡರಿ.

ವೆಂ—ಹೌದು ನಾಳೆ ಸಾಯಂಕಾಲ ನಾನಿಲ್ಲಿಗೆ ಬರತೀನಿ. ನೀನೂ ಮನೆಯಲ್ಲಿಯೇ ಇರು. ಕೃಷ್ಟರಾಯಗ ವಿಷಯನಿರೂಪಣ ಮಾಡೋಣ. ದೇವರ ಆತಗ ಸತ್ಪ್ರೇರಣೆ ಮಾಡಿಯೇ ಮಾಡ್ಯಾನು!

ಶ್ರೀ—ಹಾಗೇ ರಾಮದೇವರ ಹೊಲಾ ಅನ್ನೋ ಜನ್ನನ ಹೊಲದ ಸಂಬಂಧ ಕಾಗದ ಪತ್ರಗಳನ್ನೂ ನಾವು ಸ್ವಲ್ಪ ನೋಡಬೇಕು.

ವೆಂ—ಆಗಲಪ್ಪ. ನೀನು ಅಷ್ಟು ಆತುರ ಪಡಬೇಡ. ಎಲ್ಲಾ ಸರಿಹೋಗತದ. ಬಡವರಿಗೆ ದೇವರು ಎಂದೂ ಅನ್ಯಾಯ ಮಾಡೋದಿಲ್ಲ. ಸ್ವಲ್ಪ ತಡಾ ಆದೀತೆ ಹೊರತು ಆತ ಅನಾಥರಕ್ಷಕನಪ್ಪ. ಸರಿ. ಒಳ್ಳೇದಮ್ಮಾ ರಾಧಕ್ಕ. ನಾನು ಹೊರಡತೀನಿ ಇನ್ನ. ಹೊತ್ತಾಗೇದ. ದಾರಿಯೊಳಗ ಕೃಷ್ಣರಾಯನ್ನ ಕರಕೊಂಡು ಹಾಗೇ ಗುಡಿಗೆ ಹೋಗತೀನಿ.

ರಾಧ—ಸ್ವಲ್ಪ ತಡೀರಿ. ಇನ್ನೇನು ಬರೋಹೊತ್ತು ಆಗೇದ.

ಶ್ರೀ—ಒಳ್ಳೇದು. ನಾನು ಹೊರಡತೀನಿ. ನಮಸ್ಕಾರ. ಅತ್ತೆಮ್ಮಾ, ನಾನು ಬರತೀನಿ.

ರಾಧ—ನೀನಿಗೆಲ್ಲಿಗೆ ಹೊರಟಿ. ನಿನ್ನ ಸಾಮಾನ ಎಲ್ಲವ ಹೇಳು. ರಾಮಣ್ಣಾ ಮನಿಗೆ ತರಿಸತಾನ.

ಶ್ರೀ—ನೋಡೋಣಂತ. (ಹೋಗುವನು)

(ರಾಧಾಬಾಯಿಯು ಅವನು ಹೋದ ಕಡೆಗೆಯೇ ನೋಡುತ್ತ ನಿಲ್ಲುವಳು.)

ವೆಂ—(ಬಾಗಿಲಮರೆಯಲ್ಲಿ ನಿಂತ ಸುಮಿತ್ರೆಯನ್ನು ಕುರಿತು) ಏನವ್ವ ಸುಮಿತ್ರಾಬಾಯಿ, ಇನ್ನೆಷ್ಟು ಹೊತ್ತು ಬಾಗಿಲಮರಿಗೆ ನಿಲ್ಲೋದು. ಹೊರಗ ಬಾ, ಚರಖಾ ಕರೀತದ.

ಸು—(ಮೆಲ್ಲಗೆ ಪ್ರವೇಶಿಸಿ) ಪಾನಕಾ ಕುಡೀಬೇಕು ಅಂತ ಕೂತವರು ನೀವು ಹೀಂಗ ಕೂತಿರಿ. ನಾವು ಕುಡಿದು ಬಿಟ್ಟಿವು.

(ರಾಧಾಬಾಯಿ ಒಳಗೆ ಹೋಗುವಳು)

ವೆಂ—ಹೌದಮ್ಮಾ. ನೀವೆಲ್ಲ ಅದೃಷ್ಟವಂತರು. ಯಾವದಕ್ಕೂ ದೈವ ಇರಬೇಕೂ ಅಂತಾರಲ್ಲ. ಅದು ಸುಳ್ಳಲ್ಲ. ನಾವು ಅಂದುಕೊಂಡದ್ದೆಲ್ಲ ಪೂರೈಸುವುದು ನಮ್ಮ ಕೈಯಾಗ ಇಲ್ಲ.

ಸು—(ಚರಖವನ್ನು ಸರಿಯಾಗಿ ತೆಗೆದಿಡುತ್ತ ಬಿಲ್ಲು ಹತ್ತಿ ಒಳಗೆಹಾಕಿ ಮುಚ್ಚುತ್ತ) ನನಗ ಇವೆಲ್ಲ ವೇದಾಂತದ ಮಾತಾಡಲಿಕ್ಕೆ ಬರೋದಿಲ್ಲ. ನಾನೇನ

ಕಲಿತಾಕೆಲ್ಲ. ಬಿ. ಎ. ಪಾಸಾಗಿಲ್ಲ. ಆದರ ಒಂದು ಪ್ರಶ್ನ ಕೇಳಲ್ಯಾ?

ವೆಂ— ಏನಮ್ಮಾ ಅನು ಕೇಳು.

ಸು— ದೇವರ ಪ್ರೀತಿಗಾಗಿ ಮಾಡೋದು, ದೇವರ ಪ್ರೀತಿಗಾಗಿ ಮಾಡೋದು ಅಂತಾರಲ್ಲ, ದೇವರು ತನಗ ಅಂಥಾದು ಬೇಕು ಇಂಥಾದು ಬೇಕು ಅಂತಾನೇನು ಆತ.

ವೆಂ— ಆತಗ ಏನ ಬೇಕಾಗೆದಮ್ಮಾ. ಸದಾ ತೃಪ್ತ. ಆತ ಬೇಡಾತಲ್ಲ. ಕೊಡತಕ್ಕಾತ.

ಸು— ಮತ್ತೆ ಅಂದಮ್ಯಾಲೆ ದೇವರ ದಶಿಂದ ಅದುಮಾಡಬೇಕು. ದೇವರ ದಶಿಂದ ಇದು ಮಾಡಬೇಕು ಅಂತ ದೇವರಿಗುನೂ ನಮ್ಮಾ ಹಾಂಗ ವಸ್ತ್ರ, ವಡವಿ, ಹೊಲ, ಮನಿ ಮಾಡತಾರಲ್ಲ! ಹೀಗ ದೇವರಿಗೇ ಅಂತ ಮಾಡೋದರ ಬದಲು ಬಡಜನರಿಗೆ ಕೊಟ್ಟರ ದೇವರಿಗೆ ಸಂತೋಷ ಆಗೋದಿಲ್ಲೇನು?

ವೆಂ— ಮುತ್ತಿನಂಥ ಮಾತು. ಚಿಕ್ಕವಳಾದರೂ ನಿನ್ನ ವಿಚಾರ ಬಹಳ ಉಚ್ಚ ಅದ. ಜಗತ್ತಿನೊಳಗ ಜೀವಿಗಳಿಗೆ ಉಪಯೋಗ ಯಾವುದ ರಿಂದ ಆಗತದೋ ಅದರಿಂದ ದೇವರಿಗೆ ಪ್ರೀತಿ ಆಗತದ. ನಮು ಗೇನು ದೇವರು ಈ ಶರೀರ, ಅವಯವ ಕೊಟ್ಟಾನಲ್ಲ ಇವೇ ವಸ್ತ್ರ ವಡವಿ. ಇವನ್ನ ಸರಿಯಾಗಿ ಇಟಗೊಂಡರ ಆತನಿಗೆ ಅಲಂಕಾರ ಮಾಡಿದಹಾಂಗ.

ಸು— ಮತ್ತೀ ಹೊಲಾ ವಗೈರೆ ಯಾಕ?

ವೆಂ— ಆಗಲೇ ಹೇಳಿದೆನೆಲ್ಲಮ್ಮಾ. ಆತಗ ಯಾವುದೂ ಬೇಕಿಲ್ಲ. ಬಿತ್ತಿ ಬೆಳಿಯೋ ಹೊಲದಿಂದ ಬರೋಕಾಳು ಜನಕ್ಕ ಸರಿಯಾಗಿ ಉಪ ಯೋಗ ಆಗೋದು ಮುಖ್ಯ. ಅದರ ದುರುಪಯೋಗ ಆಗಬಾರದು. ಹಾಗೆ ನೋಡಿದರೆ ಈ ರೀತಿಯಾದ ಹೊಲದ ವತ್ತಿಯಿಂದ ನಿಜವಾದ ದೇವರ ಪ್ರೀತಿ ಸಂಪಾದಿಸಲಾರೆವು. ನಮ್ಮಾ ದೇಹವೇ ಒಂದು ಹೊಲಾ ಇದ್ದಾಂಗ. ಇದರಲ್ಲಿಯೇ ನಾವು ಕೃಷಿಮಾಡಿ, ಇದರ

ಫಲವನ್ನೆಲ್ಲ ಜನರ ಸೇವೆಗಾಗಿ ದತ್ತಿ ಕೊಟ್ಟುಬಿಡಬೇಕು. ಆಗ ದೇವರು ಸಂಪ್ರೀತನಾಗತಾನ. ಮತ್ತೆ ಅದೇ ನಿಜವಾದ ಪೂಜೆ.

ಸು—ಹೀಂಗ ಇದ್ದ ಮ್ಯಾಲ ಈ ಗುಡಿಗುಂಡಾರ ಸಿಂಗಾರ ಹೊಲಾ ಮುಂತಾದ್ದು ಯಾಕ ಮಾಡತಾರ ?

ವೆಂ—ಇದೆಲ್ಲ ಮನಷ್ಯ ತನ್ನ ಅಂತರಂಗ ಶುದ್ಧಿಗೆ, ಜನಸೇವೆಗೆ ಅನುಕೂಲ ವಾಗಿರುವಂತೆ ಮಾಡಿಕೊಂಡ ಬಾಹ್ಯ ವಾತಾವರಣನೇ ಹೊರತು ಮತ್ತೇನಿಲ್ಲ.

ಸು—ಅನುಕೂಲದ ಬದಲು ಪ್ರತಿಕೂಲನೇ ಆಗೇದಲ್ಲರಿ ಈಗೆಲ್ಲ.

ವೆಂ—ಮನುಷ್ಯನ ಸ್ವಾರ್ಥ ಹೆಚ್ಚಿದಾಗ ಹೀಗೆ ಆಗೋದು ಸಹಜ. ಆದ್ದ ರಿಂದ ಸದಾ ಸಜ್ಜನರ ಸಹವಾಸದಲ್ಲಿದ್ದು, ಸತ್ಕರ್ಮಾಚರಣೆಯ ಲ್ಲಿದ್ದರೆ, ಈ ಸ್ವಾರ್ಥ ಕಡಮೆಯಾಗಿ ಎಲ್ಲ ಅನುಕೂಲ ಆಗತದ. ಇದಕ್ಕ ಸತತ ಪ್ರಯತ್ನ ಬೇಕು. ಪ್ರತಿಯೊಬ್ಬರು ಈ ಪ್ರಯತ್ನ ವನ್ನು ತಪ್ಪದೆ ಮಾಡಬೇಕು. ಆಗಲ್ಯಕ್ಕ, ನಾನು ಬರತೀನಿ. ದೇವರು ನಿಮಗೆಲ್ಲ ಅನುಕೂಲಮಾಡತಾನೆ. ನಾನು ಹೊರಡತೀನಿ. ರಾಧಕ್ಕಗ ಹೇಳಿಬಿಡು.

— ತೆರೆ —

## ಪ್ರವೇಶ ಮೂರು

ಊರಿನ ಒಂದು ಬೀದಿ. ಸಾಯಂಕಾಲ ೫ ಗಂಟೆಯ ಸಮಯ

( ಶ್ರೀನಿವಾಸ ಮತ್ತು ಸದಾಶಿವಯ್ಯ ಪ್ರವೇಶಿಸುವರು. )

ಶ್ರೀ—ನಾವು ಸ್ವಲ್ಪ ಇಲ್ಲೇ ನಿಲ್ಲೋದು ನೆಟ್ಟಗ. ಚನ್ನಪ್ಪ ಅಂತು ಈ ಊರಿಗೆ ಬಂದಾನ. ಇದು ನಿನಗ ಖಾತ್ರಿಗೊತ್ತದ. ನಮ್ಮ ಕಡಿಗೆ ಅವನು ಇನ್ನೂ ಬಂದಿಲ್ಲ. ಅಂದಮ್ಯಾಲ ಸಂತಿಗೆ ಹೋಗಿರಲಿಕ್ಕೆ ಬೇಕು ಇಲ್ಲೇ ನಿಂತು ದಾರಿನೋಡೋಣ. ಈ ಹಾದಿಯಿಂದನ್ನ ಅಲ್ಲ ಅವನು ನಮ್ಮ ಕಡೆಗೆ ಬರಬೇಕಾದರ! ಯಾಕಂದರ ಅವನಿಗಿಷ್ಟು ಧೈರ್ಯಹೇಳಿ ಮಾವಯ್ಯನ ಹತ್ತರ ಕಳಿಸೋಣ. ಅಲ್ಲಿಂದ ನಾವು ಡಾಕ್ಟರ ಮಾವಾನ ದವಾಖಾನಿಗೆ ಹೋಗಿ ಆತನ್ನ ಕರಕೊಂಡು ಹೋಗೋಣ.

ಸದಾ—ಅಂತೂ ನೀವು ಯಂಕಪ್ಪಾಚಾರನ್ನ ಇದಕ್ಕ ಹಿಡವದ್ದು ನೆಟಗ ಮಾಡಿದಿರಿ.

ಶ್ರೀ—ಪಾಪ! ಅವರು ಮತ್ತೇ ಇವೊತ್ತು ಮುಂಜಾನೆನೂ ಹೇಳಿಕಳಿಸಿ ನಿಮ್ಮನ್ನ ಡಾಕ್ಟರ ಮಾವಾನ್ನ ಕರಕೊಂಡ ಬಾ ಅಂತನೂ ಹೇಳಿದರಲ್ಲ!

ಸದಾ—ನಿಮ್ಮಾವಾ ಅವರೇ ಅವರಿಗೆ ನಮ್ಮನ್ನೂ ಕರದುಕೊಂಡು ಬಾ ಅಂತ ಹೇಳ್ಯಾರೋ ಏನೋ ಅಂತೀನಿ.

ಶ್ರೀ—ಆತೇನು ಹೇಳಿರಲಿಕ್ಕಿಲ್ಲ. ಹೇಳಿದ್ದರಾದರೂ ಏನಾತು? ನೆಟ್ಟಗ ಆತು. ಆದರೂ ನಾನು ಮಾತ್ರ ಬರಬಾರದು ಅಂತಮಾಡೀನಿ. ನೀವೆಲ್ಲ ಇದ್ದಮ್ಯಾಲೆ ಎಲ್ಲಾ ಮಾತು ಬಗೆಹರೀತದ. ನಾನಿದ್ದರ ಮತ್ತೆ ವಿನಾಕಾರಣ ಮನಸ್ತಾಪಕ್ಕ ಕಾರಣ.

ಸದಾ—ಯಾಕ ನೀವು ಇಷ್ಟು ಹೆದರತೀರಿ ಅಂತೀನಿ.

ಶ್ರೀ—ಹೆದರಬೇಕು ಸದಾಶಿವಯ್ಯ! ಹೆದರಬೇಕು. ಹೆದರ ಬೇಕಾದಲ್ಲಿ ಹೆದರೇ ಹೆದರಬೇಕು. ಆಗಲಿ ನೋಡೋಣ. ಡಾಕ್ಟರ ಮಾವಾ

ಕೃ—ಕೊಡ್ರಿ. (ನೀಲಕಂಠರಾಯ ಸುಖಾಸೀನದಲ್ಲಿ, ಸದಾಶಿವಯ್ಯ ಶ್ರೀನಿವಾಸ ಬಾಕಿನ ಮೇಲೆ ಕೂಡುವರು. ಆಚಾರ್‍ರು, ಕೃಷ್ಣರಾಯರು ಮೊದಲು ಕುಳಿತ ಸ್ಥಳಗಳಲ್ಲಿಯೇ ಕೂಡುವರು.) ಏ ಚೆನ್ನ! ಹೋಗು ನೀನು, ಜನ ಬಂದಾರ. ನಾನು ಮಾತಾಡಬೇಕಾಗೇದ.

ವೆಂ—ಅನಕಾ ಹೊರಗ ಕೂಡು ಚೆನ್ನಪ್ಪ (ಚನ್ನಪ್ಪನು ಹೊರಗೆ ಹೋಗುವನು.) ವನು.) ಅದೇನು ಸದಾಶಿವಯ್ಯ ಕೈಯಲ್ಲಿ?

ಸದಾ—ಹಳೆಯ ವರ್ತಮಾನ ಪತ್ರ. ಆಚಾರ! ನಿನ್ನೆ ನಮ್ಮ ತರುಣ ಸಂಘದ ಕಾರ್ಯ ಸಮಿತಿಯ ಸಭಾ ಕೂಡಿತ್ತು. ನಮ್ಮ ರಾಯರು ನಡೆಸಿಕೊಂಡು ಬಂದಿರೋ ರಾಮದೇವರ ಜಾತ್ರೆಯ ಸದ್ಧರ್ಮದ ಕೆಲಸಾನ್ನ ಶ್ಲಾಘಿಸಿ, ಅವರು ನಿರ್ವಹಿಸುತ್ತಿರೋ ಕಾರ್ಯಕ್ಕ ಜನರ ಬೆಂಬಲಾ ಕೋರಿ, ರಾಯರಿಗೆ ಅಭಿನಂದನೆಗಳನ್ನರ್ಪಿಸಿ, ಅವರಿಗೆ ತರುಣರು ಸಹಕಾರ ನೀಡಬೇಕು ಅಂತ ಸಭಾ ಒಂಧು ತೀರ್ಮಾನ ಸ್ವೀಕರಿಸೇದ. ಅದನ್ನು ರಾಯರಿಗೆ ಕೊಡಬೇಕು ಅಂತ ತಂದೀವಿ. (ಓಲೆಯೊಂದನ್ನು ರಾಯರಿಗೆ ಕೊಡುವನು. ರಾಯರು ಓದುತ್ತಿರುವರು. ನೀಲಕಂಠರಾಯರು ಆಚಾರ್ಯರ ಕಡೆಗೆ ನೋಡಿ ಮುಗುಳುದಗೆ ನಗುವರು.)

ವೆಂ—ಮತ್ತೆ ಆ ಹಳೇ ವರ್ತಮಾನಪತ್ರವೇನು?

ಕೃ—(ಆನಂದದಿಂದ) ತರುಣರು ಜಾತ್ರೆಯ ಕಾರ್ಯದಲ್ಲಿ ಸಹಕಾರ ನೀಡೋದಕ್ಕಾಗಿ ಉತ್ಸಾಹಿತರಾಗಿರೋದು ಶುಭಸೂಚಕವೇ ಸರಿ. ಯಾಕರಿ ವೆಂಕಪ್ಪಾಚಾರ? ನನಗೂ ಅದೇಬೇಕು. ಆದರ ನಮ್ಮ ಹಳೇ ಸಂಪ್ರದಾಯಗಳಿಗೆ ಅನುಸರಿಸಿಕೊಂಡು ಮಾತ್ರ ನಡೆಯಬೇಕು. ಕನಿಷ್ಠ ನಾವು ಹಳೆಯ ಜನರು ಇರೋವರೆಗಂತೂ ಸತ್ಸಂಪ್ರದಾಯಗಳಿಗೆ ಧಕ್ಕಿ ಬರಗೊಡಲಾರೆವು. ಈ ರೀತಿಯಲ್ಲಿ ಒಪ್ಪಿಕೊಂಡು ಸಹಕಾರ ನೀಡಿದರ ಅದಕ್ಕ ಸುಸ್ವಾಗತ.

ವೆಂ—ಅದರೊಳಗ ಸಂದೇಹನ ಇಲ್ಲ. ನಮ್ಮ ಹಿರಿಯರು ಹಾಕಿರುವ ಸತ್ಸಂಪ್ರದಾಯಗಳು ಅಂದರ ತ್ರಿಕಾಲಾಬಾಧಿತವಾದ ಸತ್ಯವನ್ನೊಳಗೊಂಡ ಒಂದೊಂದು ತತ್ವದ ದ್ಯೋತಕಗಳು.

ಮೂರು ಕಡಿಗೆ ಓಗಿದ್ದೆ. ನಿಮ್ಮ ಇಬ್ಬರದೂ ಬೆಟ್ಟಿ ಆಗಲಿಲ್ಲ. ದಾರ್‍ಯಾಗ ನಮ್ಮ ಬೀರಪ್ಪ ಕಂಡ. ಬಿಡಲಿಲ್ಲ. ಮನಿಗೆ ಕರಕೊಂಡು ಓದ. ಅಲ್ಲೆ ರೊಟ್ಟಿ ತಿಂದೆ. ಈಗ ಸೆಂತ್ಯಾಗ ಓಗಿದ್ದೆ.

ಸದಾ—ಈಗ ಹೊರಟದ್ದು ಎಲ್ಲಿಗೆ?

ಚೆ—ದಣೀತಾಗ್ಸ ಹೊಂಟೇನಿ. ಮಲಗಿ ಎದ್ದಿರಬೇಕು ಇಟೊತ್ತಿಗಾಗಲೇ. ಎಪ್ಪ, ಮತ್ತೆ ಆ ಎಂಕಪ್ಪ ಅಚಾರೇರು ಏನ್ಸ ಏಳ್ಯಾರ ಅಂತಲ್ಲ ನಿಮುಗ

ಶ್ರೀ—ನೀನು ವೆಂಕಪ್ಪಾಚಾರನ್ನ ಯಾವಾಗ ಕಂಡಿದ್ದಿ?

ಚೆ—ನಾನು ರಾಮಪುರದಿಂದ ಬರ ಮುಂದ ದಾರ್‍ಯಾಗ ಗುಡಿ ಮುಂದ ನಿಂತಿದ್ದರೆಪ್ಪ. ಮಾತಾಡಿಸಿದರು. 'ಚೆನ್ನ ನೀನು ಚೆಂಜ ಮುಂದ ದಣಿತಾಗ ಬಾ. ನಾನು ಅಲ್ಲೇ ಇರತೀನಿ. ಸೀನಣ್ಣಗೂ ಏಳೀನಿ.' ಅಂದರು. ಯಾಕ ಗದ್ದಲ ಮಾಡತೀರಿ. ಮತ್ತ ದಣಿ ಇನ್ನಷ್ಟು ಸಿಟ್ಟಾದಾನು. ನಾಕ ಜೇದರ ನನಗೆ ಬೇತಾನ. ಮತ್ತೆ ಒಲಾ ಕೊಡತಾನ. ಎಲ್ಲಾರನ ಯಾಕ ನೆರಸ್ತೀರಿ ಅಂದೆ. ಅದಕ್ಕೆ ಅವರು 'ನೀ ಏನು ಕಾಳಜಿ ಮಾಡಬ್ಯಾಡ. ಓಗು' ಅಂತ ಏಳಿದರೆಪ್ಪ. ಅದಕ ಮತ್ತ ನಿನ್ನ ಇಚಾರಿಸಿದೆ.

ಶ್ರೀ—ನಾನೊಬ್ಬನೇ ಅಲ್ಲ, ಮಾಸ್ತರು, ಡಾಕ್ಟರು, ಮೂರೂ ಮೂರು ಮಂದಿ ಬರತೀವಿ. ಇಲ್ಲದ ಇದ್ದರ ಇಪ್ಪದ್ದೊಂದು ನಿನ್ನ ಪಟ್ಟೇದ ಹೊಲಾ ಕೈಬಿಟ್ಟು ಹೋದೀತು. ನೀನು ಸ್ವಲ್ಪ ಧೈರ್ಯದಿಂದ ಮಾತಾಡು ಏನಪ್ಪ. ನಿನಗೇನು ಮುದಕಾದಿ! ಮುಂದ ನಿನ್ನ ಮಕ್ಕಳು ಮರಿ ಕಾಳಜಿ ಬೇಕೋ ಬ್ಯಾಡ ನಿನಗ?

ಚೆ—ಕೂಸು ತಾನು ಉಟ್ಟದಕಿಂತ ಮುಂಚ್ಯಾಕ, ತಾಯಿ ಒಟ್ಟ್ಯಾಗ ಆಲು ಇಟಗೊಂಡು ಬರತೈತೇನಪ್ಪ? ಶಿವ ಕೊಡಾವ ಬ್ಯಾರೆ ಅದಾನ.

ಶ್ರೀ—ಅಡ್ಡ ಹಾದಿ ಹಿಡಿದೆಲ್ಲಪ್ಪ ಮತ್ತೆ ನೀನು! ಸ್ವಲ್ಪ ನನ್ನ ಮಾತು ಕೇಳತೀದ್ಯೊ ಇಲ್ಲೋ?

ಚಿ—ಕೇಳದೆ ಏನು ಎಪ್ಪ?

ಸದಾ—ನೀನು ರಾಯರಿಗೆ ಸ್ಪಷ್ಟವಾಗಿ ಕೇಳು. ಸಾಲ ಕೊಟ್ಟಿದ್ದರ ತಿರಗಿ ಕೊಡಲಕ್ಕ ಬಂದೀತಂತ. ಹೊಲಾ ಹ್ಯಾಂಗ ಕಸಗೋತಾರ.

ಚಿ—ಆಗಲರಿ. ದೇವರು ಏನು ಬುದ್ದಿ ಕೊಡತಾನೋ ಅದನ್ನ ಏಳತೀನಿ· ಎಂಕಪ್ಪ ಆಚಾರೇರು ಇದನ್ನ ಏಳ್ಯಾರ.

ಶ್ರೀ—ಒಳ್ಳೇದು ನೀನು ಹೋಗು. ನಾನು, ಮಾಸ್ತರನ್ನ, ಡಾಕ್ಟರ ಮಾಮನ್ನ ಕರಕೊಂಡು ಬರತೀವಿ.

ಚಿ—ಅಂಗ ಮಾಡೆಪ್ಪ. ಓಗತೀನಿ. (ಹೋಗುವನು)

ಶ್ರೀ—ನಡೇರಿ ಮಾಸ್ತರ ಹೋಗೋಣ. (ಚಿನ್ನಪ್ಪನು ಬಂದ ಕಡೆಯಿಂದ ಹೋಗುವರು)

— ತೆರೆ —

# ಪ್ರವೇಶ ೪

(ಕೃಷ್ಣರಾಯರ ಮನೆಯ ಮುಂದಿನ ಅಂಗಳ. ರಾಯರು ಸುಖಾಸನದಲ್ಲಿ ಕುಳಿತಿದ್ದಾರೆ. ಬಳಿಯಲ್ಲಿ ಇನ್ನೂ ಒಂದೆರಡು ಸುಖಾಸನಗಳು, ಒಂದು ಬಾಕು ಇವೆ. ರಾಯರು ತೆಳ್ಳನ್ನ ಒಂದು ಅಂಗಿ ಹಾಕಿಕೊಂಡಿದ್ದಾರೆ. ಕನ್ನಡಕವನ್ನಿಟ್ಟು ವೃತ್ತ-ಪತ್ರಿಕೆಯನ್ನು ಓದುತ್ತಿದ್ದಾರೆ.)

ಕೃ—ರಾಮಣ್ಣಾ, ಏ ರಾಮಣ್ಣಾ. ವೆಂಕಪ್ಪ ಆಚಾರು ಏನು ಮಾಡತಾರ ಒಳಗ ಇನ್ನ. ಈಗ ಜ್ವರ ಎಷ್ಟು ಆವಂತ ನೋಡಿದರೇನು ?

ವೆಂ—(ಪ್ರವೇಶಿಸಿ) ಉಶ್ಶ ರಾಮರಾಮ. ಈ ಸಾರೆ ಏನು ಕುದೀ ಆದ ಅಂತೀನಿ. ಈ ಬಿಸಲಿಗೆ ಸುಮ್ಮಕ್ಕಗ ಸ್ವಲ್ಪ ಸುಸ್ತ ಆಗೇದ. ಅದೇನ ಮಾಡತದ.

ಕೃ—ಈ ಮಂದಿ ಎಚ್ಚರಿಕೆಯಿಂದ ಇರೋದಿಲ್ಲರಿ. ಮಂದೀಮನೀ ಪ್ರಸಾದಕ್ಕಽ ಅಂದರ ಎದ್ದಗಾಲಲೇ ತಯಾರ ಆಗತಾರ. ಅದರಾಗ ಆ ನೀಲಕಂಠರಾಯನ ಮನೀಗೆ ಬ್ಯಾಡ ಅಂತ ನಾ ಮೊದಲಿನಿಂದ ಹೇಳ ತೀನಿ. ಯಾರು ಕೇಳಬೇಕು ನಮ್ಮ ಮಾತು ?

ವೆಂ—(ನಿಟ್ಟುಸಿರು ಗರೆದು) ನಾರಾಯಣ ನಾರಾಯಣ. ಆಗಲಿ. ಆಗಲಿ. ಇಟ್ಟಂತೆ ಇರು, ಆದದ್ದಕ್ಕ ಒಪ್ಪು ಅಂತ ನಮ್ಮ ಹರಿದಾಸರು ಹೇಳಿದ್ದು ಸುಳ್ಳೇನು ?

ಕೃ—ಯಾವುದು ಸುಳ್ಳೋ ? ಯಾವುದು ಖರೇನೋ ? ನನಗೆ ತಿಳೀದ್ಹ ಹಾಂಗ ಆಗೇದ. ರಾಮಣ್ಣಾ, ಆ ರಾಮಪುರದ ಚನ್ನ ಏನು ಬರಲೇ ಇಲ್ಲ. ನೀ ಅವಗ ಹೇಳಿ ಬಂದೀದ್ಯೋ ಇಲ್ಲೊ ?

ರಾಮ—ನೀವು ನಂಬರಿ ಬಿಡರಿ ರಾಯರ. ನಾನು ಹೇಳಿ ಬಂದೀನಿ. ಮತ್ತೆ ನಾನು ಹೇಳೋ ಮುಂದ ಸೀನಣ್ಣಾ (ಬಾಯಿಕಚ್ಚಿ) ಅಲ್ಲ ಸದಾ ಶಿವಯ್ಯ ಮಾಸ್ತರು ಇದ್ದರು.

ಕೃ—ನಾನು ಸಾಕ್ಷಿ ಕೇಳಲಿಲ್ಲ. ಹೇಳಿದ್ದರನೂ ಅವಾ ಬರಲಿಲ್ಲ ಅಂದರ ಅವನ ಕಣ್ಣು ನೆತ್ತಿಮ್ಯಾಲ ಬಂದವ ಅನಬೇಕೋ ಏನು ?

ಚೆ—(ಪ್ರವೇಶಿಸಿ) ಸಲಾಮು ದಣಿ. ಸಲಾಮುರಿ. ಆಗಲೇ ಬಂದೀನಿ ಎಪ್ಪ. ಒಳ ಅಂಗಳದಾಗ ಕೂತಿದ್ದೆ.

ಕೃ—ಊಂ! ಅಂತೂ ಬಂದೀ ಅನ್ನು. ಕೂಡು. (ಚೆನ್ನ ಕೂಡುವನು) ಒಳ್ಳೇದು ರಾಮಣ್ಣಾ. ನೀನು ಹೋಗು. ಇಲ್ಲಿ ನೋಡು ಒಳಗೆ ಹೋಗಿ ದೀಪ ಹಚ್ಚಿಸಿಕೊಂಡು ತಂದಿಟ್ಟು ಹೋಗು. (ರಾಮಣ್ಣ ಹೋಗುವನು) ಚೆನ್ನಾ!

ಚ—ಎಪ್ಪಾ.

ಕೃ—ಹೋದ ವರ್ಷ ನಾನು ಹೇಳಿದ್ದು ನೆನಪದನೋ ಇಲ್ಲೋ?

ಚೆ—ಯಾ ಸುದ್ದಿ ಎಪ್ಪ?

ಕೃ—ಮತ್ತೆ ಯಾವ ಸುದ್ದಿ? ಎರಡೂ ಹೊಲಾ ನೀನು ಈ ಸಾರೆ ಬಿಟ್ಟು ಬಿಡಬೇಕು ಅಂಬೋದು.

ಚೆ—ಅಂಗಾದರ ಅಂಗ ಆಗಲಪ್ಪ ಸಲವೋತ ನೀನು. ಒಲಾ ಬ್ಯಾಡ ಅಂದರ ಮತ್ತೆಲ್ಲಾರ ದುಡಿಸಿಗೊಂಡು ಒಟ್ಟೇಗ ಆಕು.

ಕೃ—ನಿನ್ನ ಹೊಟ್ಟೇಗ ಹಾಕೋ ಗುತ್ತಿಗಿ ನಾನು ತಗೊಂಡಿಲ್ಲ. ಇಂಥಾ ಅಕ್ಕರತದ ಮಾತು ಆಡಬ್ಯಾಡ. ನಾನು ಆಗಲೇ ಬ್ಯಾಡರ ತಿಮ್ಮಗ ಕರಿಸಿ ಹೇಳೀನಿ. ನಾಳೆ ನಾಡವರಾಗ ಅಂವಾ ಎರಡೂ ಹೊಲಕ್ಕ ಹರಗಲಿಕ್ಕ ಸುರು ಮಾಡತಾನ. ಮತ್ತ ನೀನು ತಂಟಿ ಗಿಂಟಿ ಹೂಡಿದೀ ಅಂದರ ಅದಕ್ಕ ನಾನು ಜಿಮ್ಮೇದಾರ ಅಲ್ಲ ಏನಪ್ಪ.

ಚೆ—ತಿಮ್ಮಪ್ಪ ನಮ್ಮೂರಾಗ ಇದ್ದು ನನ್ನ ಒಟ್ಟೇಮ್ಯಾಗ ಕಲ್ಲು ಯಾಕ ಆಕ್ಯಾನ ಎಪ್ಪ? ಆತಗೂ ನನ್ನಾಂಗ ಮಕ್ಕಳುಮರಿ ಅದ್ಯಾವ. ನನ್ನಾಂಗ ಆತನೂ ಭೂಮಿತಾಯಿ ಪದರಿಗೆ ಬಿದ್ದಾಂವಾ.

ಕೃ—ಅಂದರೇನು? ನೀನು ಜಗಳ ಹೂಡಬೇಕು ಅಂತ ಸಂಪೂರ್ಣ ತಯಾರಿ ಮಾಡೀದಿ ಅನ್ನು.

ಚೆ—ನೋಡು ನಾನ್ಯಾಕ ಜಗಳಾ ಊಡಾಕ ಓಗಲಿ. ಇದ್ದವು ಎರಡು ಒಲಾ ಕಸಗೊಬೇಕು, ನನಮ್ಯಾಗ ಕೈ ಎತ್ತಬೇಕು ಅಂತ ಮನಸು

ಮಾಡಿ ತಿಮ್ಮಪ್ಪ ಮುಂದ ಬಂದರ ನಾನು ಜಗಳಾ ಊಡಿದಂತೆ ಆತೇನಪ್ಪ? (ರಾಮಣ್ಣನು ಕಂದೀಲು ತಂದು ಇಟ್ಟು ಹೋಗುವನು)

ಕೃ—ನಿನಗ ಇನ್ನೂ ಸೊಕ್ಕು ಮುರದಿಲ್ಲೋ. ಭಿಕಾರಿ ನಾಯಿ ತಿರಗಿದ್ಹಾಂಗ ತಿರಗಿದೀ ಅಂದರ ತಿಳೀತದ ತಿಮ್ಮಾ, ನಾ ಹೇಳಿದ್ಹಾಂಗ ಮಾಡ ತಾನ ಅಂಬೋದನ್ನ ಮರೀಬ್ಯಾಡಾ. ಅವನಿಗೆ ನೀನು ಅದೂ ಇದೂ ಅನಬ್ಯಾಡಾ. ತಿಳೀತಿಲ್ಲೊ.

ಚಿ—ಇಲ್ಲ ಎಪ್ಪ ನಾನು ಯಾಕನ್ನಲಿ! ನಿನ್ನತಾಗ ತಿರಕ ಆಗೇ ಬಂದೀನಿ. (ಕಣ್ಣುತುಂಬ ನೀರು ತಂದು) ಮಕ್ಕಳುಮರಿ ಉಪಾಸ ಬೀಳತಾವ. ಬ್ಯಾರೆ ಒಲಾನೆ ಇಲ್ಲ. ಊರಬಿಟ್ಟು ಎಲ್ಲಿಗೆ ಓಗಬೇಕು? ಈಗ ಮನ್ಸ್ಯಾಗ ನಾಲ್ಕು ಮಂದಿ ಕೂಲಿಗೆ ಓಗತಾರ ಈ ಸಾರೆ ಅರ್ವಕ್ಕಿಂತ ಜಾಸ್ತಿ ಸಾಲದಾಗ ಓದವು. ಮೇವು ಮಾರಿ ಅಬತಿ ತುಂಬೀನಿ. ದನಕ್ಕ ಮೇವು ಸುದ್ದಾ ಇಲ್ಲ. ಇಂತಾ ಕಾಲದಾಗ ನೀನು ಅಂತಕ್ಕರಣಾ ಮಾಡದಿದ್ದರ ಇನ್ಯಾರು ಮಾಡಬೇಕು?

ವೆಂ—ಚಿನ್ನಪ್ಪ ಈ ಪ್ರಸಂಗ ಯಾಕ ತಂದುಕೊಂಡಿ?

ಕೃ—ಲುಚ್ಛ್ಯಾ ಇದ್ದಾನವಾ. ಏನಂತ ತಿಳದೀರಿ. ತನಗ ತಿನ್ನಲಿಕ್ಕೆ ಕೂಳು ಇಲ್ಲದಿದ್ದರೂ, ಊರತುಂಬ ಜಂಬಾ ಕೊಚ್ಚಿಗೋತ ತಿರಗ ತಾನ. ಒಬ್ಬರದೂ ಲಕ್ಷ್ಯನ್ಹ ಇಲ್ಲ.

ಚಿ—ಪರಸಂಗ ಶಿವನ ತಂದಾನ ಆಚಾರೇರ! ಈ ವರಸ ಒಲದ ಸಾಗೋಳಿ ರಕಮು ಅಪ್ಪಗ ಕೊಡೋದಾಗಿಲ್ಲ. ಕಬ್ಬಿಣ ಮಡಿಕಿ ಕಟ್ಟಿಸಬೇಕು ಅಂತ ಮಾತಾಗಿತ್ತು. ಏನ ಮಾಡಬೇಕು? ನಮ್ಮ ದೊಂದು ಚಲೋ ಎತ್ತು ಸತ್ತು ಓತು. ಮನಸು ಕಚ್ಚ ಅನಿಸಿ ಬಿಟ್ಟಿತು. ಮಂದಿ ಕಡಿಂದ ಬದಲು ಎತ್ತುನೂ ಸಿಗಲಿಲ್ಲ.

ವೆಂ—ಅಂದರೇನಾಯಿತು? ಇಷ್ಟು ವರುಷದಿಂದ ಹೊಲಾಮಾಡಿಕೊಂಡು ಬಂದೀದಿ. ಈ ರಕಮು ಕೋಡೋ ತಗೊಳ್ಳೋದು ನಡದ್ಹ ಅದ, ಹೊಸಾದೇನಲ್ಲ. ಇಂಥಾ ಅನಾನುಕೂಲ ವ್ಯಾಳ್ಯಾದಾಗ ಕೃಷ್ಣರಾಯ ನಿನಗೆ ಸವಲತ್ತು ಕೊಟಗತನ್ಹ ಬಂದಾನಂತ ಅನ್ನು ಅಂಥಾದ್ದು

ಈಗ ಆತ ಇಷ್ಟು ನಿಷ್ಠುರ ಆಡೋ ಹಾಂಗ ನೀ ಏನು ಮಾಡೀದೀ ಹೇಳು ?

ಚೆ—( ಲೆಯನ್ನು ನೆಲಕ್ಕಿಟ್ಟು ನಮಸ್ಕಾರಮಾಡಿ, ಗದ್ಗದಿತ ಕಂಠನಾಗಿ) ಶಿವನತ್ತನ ಕೈ ಎತ್ತಿ ಏಳತೀನಿ ಎಪ್ಪ! ಕನಸನ್ಯಾಗ ಮನಸನ್ಯಾಗ ಸುದ್ಧಾ ನಾನು ನನ್ನ ದಣಿಗಾಗಲಿ, ಆತನ ಮಂದಿಗಾಗಲಿ ಎರಡನೇ ತಿಳದಿಲ್ಲ. ಕೆಟ್ಟ ಇಚಾರಾ ಮಾಡಿಲ್ಲ. ದಣಿ ನನಮ್ಯಾಗ ಸಿಟ್ಟ ಆಗಾಂಗ ಯಾಕ ದೇವರು ಮಾಡ್ಯಾನೋ ಶಿವಗ ಗೊತ್ತು ಮತ್ತ ಅಂಗs ಏನಾರ ಆಗಿದ್ದರ, ನೀವು ನಾಕಮಂದಿ ಚೀ ಮಾಡಿ ಅಲ್ಲ ಅಂತ ಏಳಿದರ, ಎಪ್ಪಾ, ನೀವು ಮಾಡಿದ ಶಿಕ್ಷಕ್ಕ ನಾನು ತಯ್ಯಾರ ಅದೀನಿ.

ಕೃ—ಹೂಂ! ನಿನ್ನ ಈ ನಾಟಕ ನನಗೇನು ಹೊಸದಲ್ಲೋ. ನಿಮ್ಮ ಜಾತೀನೇ ಅಂಥಾದು. ನಿಮಗ ಏನು ಮಾಡಿದರು ಅಷ್ಟೇ ಅದ. ನೀನು ಮಾಡೋ ಅಪರಾಧಕ್ಕ ದೇವರ ಶಿಕ್ಷಾ ಕೊಡತಾನ. ನಿನ್ನ ದಶಿಂದ ಇಲ್ಲೇನು ಪಂಚೇತಿ ನೆರಸಬೇಕಾದ್ದೇನು ಕಾರಣ ಇಲ್ಲ. ತಿಳೀತಿಲ್ಲೋ. ನಡೀ ಇನ್ನ, ತಿರಗಿ ಮುರಗಿ ಆಡಿದ್ದೇ ಆಡಿಕೋತ ಕೂಡಲಿಕ್ಕೆ ನನಗೇನು ಹೊತ್ತಿಲ್ಲ.

ಚೆ—(ಅಂಗಲಾಚಿ) ಅಂಗ ಮಾಡಬ್ಯಾಡ ಎಪ್ಪಾ. ಸೀನಪ್ಪ ದಣೀ ಒಲದ್ದ ಶಿಂದ ಆದರ ಮತ್ತೆ ಬೇಕಾರ ಬರತೀನಿ ಅಂತ. ನನ್ನೊಲಾ ಅಟು ನನಗೆ ಬಿಡು. ತಿಮ್ಮಪ್ಪಗ ಆ ಒಲಕ್ಕ ಬರಬ್ಯಾಡ ಅಂತ ಏಳಿ ಬಿಡು ನನ್ನೊಡ್ಯಾ. ಇಲ್ಲದಿದ್ದರ ನಂದು ಚಾಕರಿನಾರ ಎಂಗ ನಡೀಬೇಕು ?

ಕೃ—ಹೂಂ! ನಿಮ್ಮ ಸೀನಪ್ಪನ ಹೊಲದ ದಶಿಂದ ಮತ್ತ ಬರತೀದೇನು ? ಮತ್ಯಾಕ ನನ್ನ ಹತ್ತಿರ ಬರೋದು ? ಅವನಲ್ಲೇ ಹೋಗು. ಚಾಕರಿಗೆ ನೀ ಇಲ್ಲ ನಿನ್ನ ಮುತ್ಯಾನಂತವರು ಸಿಗತಾರ. ಹೊಲದ ಸುದ್ದೀ ಮಾತಾಡಬ್ಯಾಡ. ಈ ಮಂದೀ ಮನಿ ಮುಣಗಸೋ ಮಾತು ಕೇಳಿಕೇಳಿ ನನಗೆ ಸಾಕಾಗೇದ.

ವೆಂ—ಅಲ್ಲ! ಅವನ ಹೊಲದ ವಿಷಯ ಏನು ?

ಕೃ—ಏನು ? ಏನು ಅಂದರ ಏನ ಹೇಳಲಿ ? ನೀಚ ಇದ್ದಾನ ಅವಾ. ಕೊಡೋ ರೊಕ್ಕಾ ಕೊಡೋದಿಲ್ಲ. ಮತ್ತೆ ಊರೊಳಗ ನೋಡಿರಿ, ಎಲ್ಲಾರಕಿಂತ ಈ ಹೋಲೇರ್ರ ಉಚ್ಚರೇನೋ ಅನ್ನೋ ಹಾಂಗ ಇವರ ವರ್ತನಿ. ಇದಕ್ಕ ನಮ್ಮ ಈ ಹುಚ್ಚರಂಡೇದು ಹೀನ್ಯಾನ ಬೆಂಬಲ. ಮತ್ತೇನ ಅವ, ಕೋತೀಗೆ ಹೆಂಡಾ ಕುಡಿಸಿದಹಾಂಗ ಆಗೇದ. ಏ ಚೆನ್ನಾ! ಹೋಗು ಇನ್ನ.

ಚೆ—(ಕಣ್ಣೀರು ಸುರಿಸುತ್ತ) ಒಟ್ಟೇ ಮ್ಯಾಗ ಒದೀ ಬ್ಯಾಡ ಎಪ್ಪಾ! ನಾನು ಕೊಡಬೇಕಾದ ರೊಕ್ಕಕ್ಕ ಬೇಕಾದರ ನನ್ನ ಒಬ್ಬ ಉಡುಗನ್ನ ನಿನ ತಾಗ ದುಡ್ಯಾಕ ಇಡು ಅಂದರ ಇಡತೀನಿ ಅಂತ.

ವೆಂ—ಈಗ ಕೃಷ್ಣರಾಯ ಜಾತ್ರಿ ಗಡಿಬಿಡಿಯೊಳಗ ಇದ್ದಾನ. ನೀನು ಜಾತ್ರಿ ಆದಮ್ಯಾಲ ಮತ್ತೆ ಬರೋದು ನೆಟ್ಟಗ ಅಂತ ಕಾಣಿಸತದ.

ಕೃ—ಆಚಾರ್ರ! ನೀವು ಸ್ವಲ್ಪ ಸುಮ್ಮನೆ ಕೂಡರಿ. ನಿಮಗ ಈ ವಿಷಯ ಗೊತ್ತಿಲ್ಲ. ಚೆನ್ನಾ, ಹೋಗೋ ನೀನು. ಹೋಗುತೀಯೋ ಇಲ್ಲೋ ?

(ಕೃಷ್ಣರಾಯರು ಎಳುವನು. ವೆಂಕಪ್ಪಾಚಾರ್ಯರು ಎದ್ದು ನಿಲ್ಲುವರು. ಚನ್ನನು ಬೆದರಿ ಎದ್ದು ನಿಂತು ಸರಿಯುವನು. ಡಾ. ನೀಲಕಂಠರಾಯ, ಸದಾಶಿವಯ್ಯ ಪ್ರವೇಶಿಸುವರು. ಅವರ ಹಿಂದೆ ಮೆಲ್ಲಗೆ ಶ್ರೀನಿವಾಸನು ಪ್ರವೇಶಿಸುವನು.)

ಡಾ. ನೀಲಕಂಠರಾವ<br>ಸದಾಶಿವಯ್ಯ —ನಮಸ್ಕಾರ

ವೆಂ<br>ಕೃ —ನಮಸ್ಕಾರ

ಕೃ—ಏನ ಬೇಕಾಗಿತ್ತು ?

ಸದಾ—ಏನಿಲ್ಲ ತಮ್ಮ ಕಡೀಗೆ ಬಂದಿದ್ದೆವು

ಕೃ—ಏನು ಸುದ್ದಿ ?

ಸದಾ—ಏನಿಲ್ಲ. ಜಾತ್ರಿ ಸಮೀಪಕ್ಕ ಬಂದದ. ತಮ್ಮ ನೇತೃತ್ವದಲ್ಲೇ ಇಷ್ಟು ದಿವಸದಿಂದ ನಡಕೊಂಡು ಬಂದದ. ತಮ್ಮ ಆಶ್ರಯದಲ್ಲಿ ತರುಣರೂ ಈ ಸತ್ಕಾರ್ಯಕ್ಕ ನೆರವು ಕೊಡಬೇಕೂ ಅಂತ.

ಕೃ—ಕೂಡರಿ. (ನೀಲಕಂಠರಾಯ ಸುಖಾಸೀನದಲ್ಲಿ, ಸದಾಶಿವಯ್ಯ ಶ್ರೀನಿವಾಸ ಬಾಕಿನ ಮೇಲೆ ಕೂಡುವರು. ಆಚಾರ್ರು, ಕೃಷ್ಣರಾಯರು ಮೊದಲು ಕುಳಿತ ಸ್ಥಳಗಳಲ್ಲಿಯೇ ಕೂಡುವರು.) ಏ ಚೆನ್ನ! ಹೋಗು ನೀನು, ಜನ ಬಂದಾರ. ನಾನು ಮಾತಾಡಬೇಕಾಗೇದ.

ವೆಂ—ಆನಕಾ ಹೊರಗ ಕೂಡು ಚೆನ್ನಪ್ಪ (ಚನ್ನಪ್ಪನು ಹೊರಗೆ ಹೋಗುವನು.) ವನು.) ಅದೇನು ಸದಾಶಿವಯ್ಯ ಕೈಯಲ್ಲಿ?

ಸದಾ—ಹಳೆಯ ವರ್ತಮಾನ ಪತ್ರ. ಆಚಾರ! ನಿನ್ನೆ ನಮ್ಮ ತರುಣ ಸಂಘದ ಕಾರ್ಯ ಸಮಿತಿಯ ಸಭಾ ಕೂಡಿತ್ತು. ನಮ್ಮ ರಾಯರು ನಡೆಸಿಕೊಂಡು ಬಂದಿರೋ ರಾಮದೇವರ ಜಾತ್ರೆಯ ಸದ್ಧರ್ಮದ ಕೆಲ ಸಾನ್ನ ಶ್ಲಾಘಿಸಿ, ಅವರು ನಿರ್ವಹಿಸುತ್ತಿರೋ ಕಾರ್ಯಕ್ಕ ಜನರ ಬೆಂಬಲಾ ಕೋರಿ, ರಾಯರಿಗೆ ಅಭಿನಂದನೆಗಳನ್ನರ್ಪಿಸಿ, ಅವರಿಗೆ ತರುಣರು ಸಹಕಾರ ನೀಡಬೇಕು ಅಂತ ಸಭಾ ಒಂದು ಠರಾವು ತೀರ್ಮಾನ ಸ್ವೀಕರಿಸೇದ. ಅದನ್ನು ರಾಯರಿಗೆ ಕೊಡಬೇಕು ಅಂತ ತಂದೀವಿ. (ಓಲೆಯೊಂದನ್ನು ರಾಯರಿಗೆ ಕೊಡುವನು. ರಾಯರು ಓದುತ್ತಿರುವರು. ನೀಲ ಕಂಠರಾಯರು ಆಚಾರ್ಯರ ಕಡೆಗೆ ನೋಡಿ ಮುಗುಳುದಗೆ ನಗುವರು.)

ವೆಂ—ಮತ್ತೆ ಆ ಹಳೇ ವರ್ತಮಾನಪತ್ರವೇನು?

ಕೃ—(ಆನಂದದಿಂದ) ತರುಣರು ಜಾತ್ರೆಯ ಕಾರ್ಯದಲ್ಲಿ ಸಹಕಾರ ನೀಡೋ ದಕ್ಕಾಗಿ ಉತ್ಸಾಹಿತರಾಗಿರೋದು ಶುಭಸೂಚಕವೇ ಸರಿ. ಯಾಕರಿ ವೆಂಕಪ್ಪಾಚಾರ? ನನಗೂ ಅದೇಬೇಕು. ಆದರ ನಮ್ಮ ಹಳೇ ಸಂಪ್ರದಾಯಗಳಿಗೆ ಅನುಸರಿಸಿಕೊಂಡು ಮಾತ್ರ ನಡೆಯಬೇಕು. ಕನಿಷ್ಠ ನಾವು ಹಳೆಯ ಜನರು ಇರೋವರೆಗಂತೂ ಸತ್ಸಂಪ್ರದಾಯ ಗಳಿಗೆ ಧಕ್ಕಿ ಬರಗೊಡಲಾರೆವು. ಈ ರೀತಿಯಲ್ಲಿ ಒಪ್ಪಿಕೊಂಡು ಸಹಕಾರ ನೀಡಿದರ ಅದಕ್ಕ ಸುಸ್ವಾಗತ.

ವೆಂ—ಅದರೊಳಗ ಸಂದೇಹನ ಇಲ್ಲ. ನಮ್ಮ ಹಿರಿಯರು ಹಾಕಿರುವ ಸತ್ಸಂಪ್ರದಾಯಗಳು ಅಂದರ ತ್ರಿಕಾಲಾಬಾಧಿತವಾದ ಸತ್ಯವನ್ನೊಳ ಗೊಂಡ ಒಂದೊಂದು ತತ್ವದ ದ್ಯೋತಕಗಳು.

ನೀಲ—ಅದು ಖರೆ. ಸಂಪ್ರದಾಯವನ್ನು ತಿಳಕೊಂಡು, ದೇಶಕಾಲ ಪರಿಸ್ಥಿತಿಗೆ ತಕ್ಕಂತೆ ನಾವು ಕೂಡ ನಡೆದು, ಅವನ್ನು ಅವಶ್ಯ ಕಾದುಕೋಬೇಕು.

ಸದಾ—ಈ ಹಳೆಯ ವರ್ತಮಾನ ಪತ್ರದೊಳಗ ರಾಯರು ಹಿಂದಕ್ಕ ಉದಾರವಾಗಿ ಮಾಡಿದ ದಾನದ ಸುದ್ದಿ ಪ್ರಕಟ ಆಗೇದ. ಈಗ ಎಂಟು ವರ್ಷದ ಹಿಂದಿನದು.

ಕೃ—ಓಹೋ! ಅದನ್ನು ಎಲ್ಲಿಂದ ದೊರಕಿಸಿದಿರಿ ?

ಸದಾ—ಇವನ್ನು ನಮ್ಮ ಸಂಘದವರು, ಆಗಲೇ ಪತ್ರಿಕೆಯ ಕಾರ್ಯಾಲಯದಿಂದಲೇ ತರಿಸಿದ್ದೆವು. ಯಾಕ ಅಂದರ ಈ ಸುದ್ದಿಯ ಜೊತೆಗೆ ನಮ್ಮ ಸಂಘದ ವರದಿಯು ಸಾರವೂ ಅದರಳೊಗ ಅಚ್ಚಾಗೇದ.

ವೆಂ—ಅದು ಸರಿ, ನಮ್ಮ ಕೃಷ್ಣರಾಯನ ಸುದ್ದಿ ಏನ ಅದ ಓದಿ ಹೇಳು.

ಸದಾ—ಹೂಂ. ಓದುವೆನು.

ಈ ದಿವಸ ಸಿರಿಪುರವು ಆನಂದೋತ್ಸಾಹದಲ್ಲಿ ತೇಲುತ್ತಿದೆ. ಸಾರ್ವಜನಿಕ ಮುಖಂಡರೂ ಆಸ್ತಿಕರೂ ಧರ್ಮಪರಾಯಣರೂ, ಸುಪ್ರಸಿದ್ಧ ವ್ಯಾಪಾರಿಗಳೂ ಆದ ಶ್ರೀ ಕೃಷ್ಣರಾಯರು ಈ ಊರಲ್ಲಿ ಶ್ರೀ ರಾಮದೇವರ ದೇವಸ್ಥಾನಕ್ಕೆ ೫೦೦ ರೂಪಾಯಿಯ ದಾನವನ್ನು ಮಾಡಿದ್ದಾರೆ. ರಾಯರು ಶ್ರೀ ರಾಮದೇವರನ್ನು ಪಲ್ಲಕ್ಕಿಯಲ್ಲಿ ತಮ್ಮ ಮನೆಯವರೆಗೆ ವಿಜೃಂಭಣೆಯಿಂದ ಮೆರವಣಿಗೆಯಲ್ಲಿ ಕರೆದುಕೊಂಡು ಬಂದು, ಮನೆಯಲ್ಲಿ ಪೂಜಾ, ಆರತಿಗಳನ್ನು ಮಾಡಿ, ತಾವು ಸಲ್ಲಿಸಿದ ಹಣದೊಂದಿಗೆ ಶ್ರೀ ರಾಮದೇವರನ್ನು ದೇವಾಲಯಕ್ಕೆ ಮರಳಿ ಮೆರವಣಿಗೆಯಿಂದ ತಿರುಗಿ ಕಳಿಸಿ ಶ್ರೀ ರಾಮದೇವರ ಕೃಪೆಗೆ ಪಾತ್ರರಾಗಿದ್ದಾರೆ. ದೇವಾಲಯಕ್ಕೆ ಸ್ಥಿರಾಸ್ತಿಯನ್ನು ಮಾಡುವುದಕ್ಕಾಗಿ ಈ ಹಣವನ್ನು ವಿನಿಯೋಗಿಸುವ ಶ್ಲಾಘ್ಯವಾದ ವಿಚಾರ ರಾಯರಿಗೆ ಇರುವುದೆಂದು ತಿಳಿದುಬಂದಿದೆ. ರಾಯರ ಈ ಔದಾರ್ಯ ಅನುಕರಣೀಯವಾಗಿದೆ.

ವೆಂ—ಹೌದು ರಾಮಣ್ಣ.

ರಾಮು—ಹೂಂ,....ಆಗಲಿ ರಾಯರ, ಚೆನ್ನ ಇನ್ನೂ ಹೊರಗs ಕೂತಾನ. ಒಳ್ಳೇದು, ಕಾಗದಪತ್ರ ತಗೊಂಡು ಬರತೀನಿ.

(ಒಳಗೆ ಹೋಗುವನು.)

ವೆಂ—ಚೆನ್ನನಿಗೆ ಕತ್ತಲಾಗತದೇನೋ ಅವನ್ನ............

ಕೃ—ಆಗಲೇ ಹೇಳಿದೆನಲ್ಲ ಅವನಿಗೆ. ಹಾಂ! ಈ ಸಾರೆ ರಥೋತ್ಸವಕ್ಕ ಅವ್ವಲ್ ತಾಲೂಕದಾರ ಸಾಬರೂ ಬರತೀವಿ ಅಂತ ಹೇಳಿ ಕಳಿಸ್ಯಾರ. ಆ ವ್ಯಾಳ್ಯಕ್ಕ ನಾವು ಸ್ವಲ್ಪ ನೆಟ್ಟಗ ವ್ಯವಸ್ಥಾ ಇಡಬೇಕಾಗತದ.

ಸದಾ—ಹೌದು. ............ಮತ್ತೆ ಜಾತ್ರಿ ಒಳಗಾಗಿ ಚೆನ್ನಪ್ಪಂದೂ ಇಷ್ಟು ಸರಿಯಾದ ವ್ಯವಸ್ಥಾ ಆಗಬೇಕು.

ವೆಂ—ಚನ್ನಂದೇನು ವ್ಯವಸ್ಥಾ ?

ಸದಾ—ಅವನ್ನ ಒಳಗ ಕರಿಸಿ ಕೇಳಿದರ ತಿಳಿತದ.

ಕೃ—ಇಲ್ಲೆ ಪಂಚೇತಿ ಹೂಡಲಕ್ಕ ಬಂದಹಾಂಗ ಕಾಣಸತದ. ಈ ಹುಡು ಗಾಟಕಿ ನನ್ನ ಮುಂದ ನಡೀಲಿಕ್ಕಿಲ್ಲ.

ನೀಲ—ಪಂಚಾಯತಿ ಏನು? ದೇವಸ್ಥಾನ ಸಮಿತಿ ಸದಸ್ಯರೇ ಅಲ್ಲ ಇಲ್ಲಿ ಕೂತವರು? ಜಾತ್ರಿಗೆ ಮತ್ತ ಚೆನ್ನಗ ಏನಾದರೂ ಸಂಬಂಧ ಇದ್ದರ ಆ ಬಗ್ಗೆ ವಿಚಾರಿಸೊದರೊಳಗ ಅಭ್ಯಂತರೇನು ?

ಕೃ—ಜಾತ್ರೀಗೇನು ಸಂಬಂಧ ಆ ಹೊಲೆಯನದು? ಮತ್ತೆ ಈ ಸಾರೆ ಹೊಲೇರ ಕಡಿಂದನs ರಥೋತ್ಸವ ಆಗಬೇಕು ಅಂತ ನೀವು ಅವನ್ನ ಮುಂದ ಮಾಡಿಕೊಂಡು ಬಂದಿದ್ದರ ನಾನು ಹೇಳಲಾರೆ.

ವೆಂ—ಛೀ. ಛೀ. ಶಾಂತಂ ಪಾಪಂ. ಇದು ಸಾಧ್ಯವಿಲ್ಲ.

ಶ್ರೀ—ಏನು ಅಂಬೋದು ತಿಳಿದಮೇಲೆ ನೀವು ಶಾಂತಂ ಪಾಪಂ ಅನ ಬಹುದಲ್ಲ.

ನೀಲ—ಏನು ಅಂಬೋದು ಹೇಳಿಬಿಡಲ್ಲ!

ಕೃ—ಅವೇನೆ ವಿಷಯ ಇರವಲ್ಲವ್ಯಾಕ. ನನ್ನ ಮನಿಯೊಳಗ ಬ್ಯಾಡ ನೀಲಕಂಠರಾಯ! ನಿನ್ನ ಮನೀ ಒಳಗ ವಿಚಾರಿಸಿಕೋ.

ವೆಂ—ಯಾರ ಮನೀ ಆದರೇನು. ನಾವು ಎಲ್ಲರೂ ಮನೀ ಅವರು ಇದ್ದ ಹಾಂಗ ಇದ್ದೀವಿ. ಹೊರಗಿನವರು ಯಾರೂ ಇಲ್ಲ. ಮತ್ತೆ ವಿಷಯ ನಮ್ಮೆಲ್ಲರ ಹಿತಕ್ಕ ಸಂಬಂಧ ಇದ್ದ ಮ್ಯಾಲ, ಕೃಷ್ಣರಾಯ, ನಿನಗಾದರೂ ಆಕ್ಷೇಪಣೆ ಇರಬಾರದು. ಹಾಗ ಆಕ್ಷೇಪಣೆಮಾಡಿ, ಇಲ್ಲದ ಸಂಶಯಕ್ಕ ಆಸ್ಪದ ಕೊಟ್ಟಂತೆ ಆಗತದ. ಸಹಕಾರ ನೀಡೋದಕ್ಕ ಬಂದವರಲ್ಲಿ ಸಂಶಯ ಬೇರೂರೋದು ಸರಿಯಲ್ಲ ಅಂಬೋ ಮಾತು ನಿನಗೆ ಬ್ಯಾರೆ ಹೇಳಬೇಕಾಗಿಲ್ಲ. ಚೆನ್ನಪ್ಪ, ಏ ಚೆನ್ನಪ್ಪ.

ಚೆ—(ಪ್ರವೇಶಿಸಿ) ಎಪ್ಪಾ!

ಸೀಲ—ಕೊಡು. (ಚೆನ್ನಪ್ಪ ಕೂಡುವನು.)

ಕೃ—ಆಚಾರ್‍ರ! ಬಂದವರಿಗೆ ಸಂಶಯಕ್ಕ ಆಸ್ಪದ ಕೊಡದಂತೆ ವರ್ತಿಸಬೇಕು ಅಂತ ನೀವು ನನಗೆ ಬುದ್ಧಿ ಮಾತು ಹೇಳಿ, ಮಾರಿಮ್ಯಾಲೆ ಕೈ ಎಳೆದು ನನಗ ನಿಮ್ಮ ಬಗ್ಗೆ ಸಂಶಯ ಬರುವ ಹಾಂಗ ವರ್ತಿಸತೀರಲ್ಲ? ಇದರ ಅರ್ಥವೇನು?

ವೆಂ—ಅರ್ಥ ಸ್ಪಷ್ಟ ಅದ. ನಿನ್ನೆ ಸಾಯಂಕಾಲ ಈ ವಿಷಯನ ಗುಡಿಯಲ್ಲಿ ಬೀಜರೂಪವಾಗಿ ನಿನಗ ಹೇಳೀ ಇದ್ದೀನಿ. ನನಗೂ ಸ್ಪಷ್ಟವಾಗಿ ತಿಳೀದೇ ಇದ್ದ ವಿಷಯಗಳನ್ನ ಈಗ ಬಂದಿರೋ ತರುಣ ಮಿತ್ರರಿಂದ ಸ್ಪಷ್ಟಮಾಡಿಕೊಂಡು, ಪರಸ್ಪರ ಬೆಳೆಯುತ್ತಿರುವ ಸಂಶಯ, ತಪ್ಪು ಕಲ್ಪನೆಗಳನ್ನ ದೂರಮಾಡಿಕೊಳ್ಳಬೇಕು, ಎಂಬೋದೇ ನನ್ನ ಉದ್ದೇಶ. ಈ ಮಾತನ್ನ ನಿನಗೆ ಹೇಳಿದಂತೆ ಅವರಿಗೂ ನಾನು ಹೇಳೀನಿ.

ಕೃ—ಅದು ಸರಿ. ಹೇಳೋದನ್ನ ನೆಟ್ಟಗೆ ಯಾಕ ಹೇಳಬಾರದು ಅಂತ. ಈ ದ್ರಾವಿಡ ಪ್ರಾಣಾಯಾಮ ಯಾಕ?

ವೆಂ—ಇಲ್ಲಿ ನೋಡು. ಸನ್ನಿವೇಶಕ್ಕ ತಕ್ಕಹಾಂಗ ವಿಷಯ ಮಾರ್ಪಡೋದು ಸಹಜ. ಈಗ ಊರೊಳಗ ಜತ್ರಿ ಗಡಿಬಿಡಿ. ಅದರೊಳಗ ನಿನ್ನ ಮನಿಯೊಳಗ ಅದು ಹೆಚ್ಚು. ನೀನು ಅದಕ್ಕ ಯಜಮಾನ. ತರುಣರಿಗೆ ಸಾರ್ವಜನಿಕ ಕೆಲಸದಲ್ಲಿ ಆಸಕ್ತಿ. ಅದಕ್ಕ

ಅವರ ಆತುರ. ಅವರು ಹಿರಿಯರ ಆಶ್ರಯ ಕೋರಿ, ಪರಸ್ಪರ ನಂಬಿಕೆ, ವಿಶ್ವಾಸ, ಪ್ರೇಮ ಬೆಳೆಸಬೇಕು ಅಂತ ನನ್ನ ಲವಲವಿಕೆ. ಅದನ್ನ ಅವರು ಮಾಡಿದ್ದಾರ. ಅದರ ಜೊತೆಗೆ ನಿನ್ನ ಮನಸ್ಸಿಗೆ ಸರಿಯಾದ ಸಮಾಧಾನ, ಶಾಂತಿ, ಒದಗಬೇಕು ಅಂತ ನನ್ನ ಬಯಕಿ.

ಕೃ—ತಿಳೀತರಿ. ನಿಮ್ಮ ಪ್ರವಚನ ಉದ್ದ ಬೆಳಸೋದು ಬೇಕಿಲ್ಲ. ಏನ ಅಂಬೋದು ಸ್ಪಷ್ಟ ಹೇಳಿಬಿಡರಿ. ನೀವು ವಕಾಲತ್ತ ತಗೊಂಡು ಬಂದೀರಿ ಅಂಬೋದು ನನಗೆ ಇಲ್ಲೀ ತನಕ ಗೊತ್ತಿದ್ದಿಲ್ಲ.

ನೀಲ—ಇದರಲ್ಲಿ ವಕಾಲತ್ತು ಏನು ಬಂತು ?

ವೆಂ—ವಕೀಲಿ ಮಾಡೋ ಯೋಗ್ಯತೆ ನನಗ ಬಂದರ ಅದೂ ನನ್ನ ಸೌಭಾಗ್ಯ ಅಂತ ತಿಳಕೊಂಡೇನಂತ. ಆದರ ಈ ವಕೀಲಿಗೆ ಫೀಸು ಮಾತ್ರ ಯಾರೂ ಕೊಡೋದಿಲ್ಲ ನೋಡು. (ರಾಮಣ್ಣನು ಕಾಗದ ಪತ್ರಗಳನ್ನು ತೆಗೆದುಕೊಂಡು ಬರುವನು. ಕೃಷ್ಣರಾಯರು ಅವುಗಳನ್ನು ರಾಮಣ್ಣನ ಕೈಯಿಂದ ತೆಗೆದುಕೊಂಡು ನೋಡುತ್ತಿರುವರು. ನೀಲಕಂಠರಾಯರು ಬಗ್ಗಿ ಆ ಕಾಗದಪತ್ರಗಳನ್ನು ನೋಡಲು ಹವಣಿಸುವರು. ಸದಾಶಿವಯ್ಯ, ಶ್ರೀನಿವಾಸ, ಗುಜುಗುಜು ಕಿವಿಯಲ್ಲಿ ಮಾತಾಡಿಕೊಳ್ಳುವರು. ಚನ್ನಪ್ಪ ಗಾಬರಿಯಾಗಿ ರಾಮಣ್ಣನ ಕಡೆಗೆ ನೋಡುತ್ತಿರುವನು. ರಾಮಣ್ಣನು ವೆಂಕಪ್ಪಾಚಾರ್ಯರ ಕಡೆಗೆ ನೋಡಿ ಗೆಲವಿನ ನಗೆಯನ್ನು ಬೀರುತ್ತಿರುವನು.)

ನೀಲ—ಇದರೊಳಗ ರಾಮದೇವರ ಹೊಲದ ಕಾಗದಪತ್ರ ಅವ ಏನು ?

ರಾಮ—ಅದು ಇದರಾಗ ಇಲ್ಲ.

ಕೃ—ಇವೆಲ್ಲ ವಸ್ತ ಒಡವಿ ಪಟ್ಟಿ, ರಸೀದಿ, ಪತ್ರವ್ಯವಹಾರ ಅದ. (ನೀಲಕಂಠರಾಯನ ಕೈಗೆ ಕೊಟ್ಟು) ನೋಡು. (ನೀಲಕಂಠರಾಯನು ತೆಗೆದುಕೊಂಡು ನೋಡುತ್ತಿರುವನು.)

ವೆಂ—ಹೂಂ! ಸದಾಶಿವಯ್ಯ! ಚನ್ನಪ್ಪಗ ಜಾತ್ರಿಗೆ ಏನು ಸಂಬಂಧ ಅನ್ನೋದನ್ನ ಸ್ಪಷ್ಟೀಕರಿಸಬೇಕಲ್ಲ!

ಸದಾ—ಸ್ಪಷ್ಟೀಕರಿಸೋದೇನು ? ಸ್ಪಷ್ಟನs ಅದ. ಎಲ್ಲಾರಿಗೂ ಗೊತ್ತಿರಲಿಕ್ಕ ಬೇಕು. ರಾಮದೇವರ ಹೆಸರಿನಮೇಲೆ ಅವನ ಪಟ್ಟೀದ ಹೊಲಾ ಕೈಬಿಟ್ಟು ಹೋಗತಿರೋ ವಿಷಯ.

ಕೃ—ಈ ಧರ್ಮಲಂಡ ಮಾತು ಕೇಳೋದಕ್ಕ ನಾನು ಸಿದ್ಧನಾಗಿಲ್ಲ ಆಚಾರ! ನೀವು............ .

ವೆಂ—ಚೆನ್ನಪ್ಪ! ನಿನ್ನ ಪಟ್ಟೀದಾ ಹೊಲಾ ದೇವರಿಗೆ ಮಾರೀದೇನು?

ಕೃ—ನೀವು ಈ ಪಂಚಾಯತಿ ನಡಸೋ ಹಾಗಿದ್ದರ ಅದು ಅದಾಲತ್ತಿ ನೊಳಗ ಇತ್ಯರ್ಥ ಆದೀತಂತ. ಇಲ್ಲೆ ಅದಕ್ಕ ಅವಕಾಶ ಇಲ್ಲ.

ಸದಾ—ದೇವರ ಹೊಲಾ ಅಂತ ಹೇಳತಿರೊ ಆ ಹೊಲಾ ಚನ್ನಪ್ಪನಿಂದ ಖರೀದಿ ಮಾಡಿದ್ದು ಹೌದೋ ಅಲ್ಲೋ ಅಂಬೋದು ಮೊದಲು ಸ್ಪಷ್ಟ ವಾದರ ಮುಂದಿನ ವಿಷಯ ಸಿರ್ಧಾರ ಆಗತದ.

ಕೃ—ಅದನ್ನ ನಾನು ಮೊದಲ್ನ ಹೇಳೀನಿ. ದೇವರಿಗಾಗಿ ನನ್ನ ಹಣ ಕೊಟ್ಟು ಹೊಲಾ ತಗೊಂಡೀನಿ ಅಂತ.

ನೀಲ—ಅಂದರ ಚೆನ್ನಪ್ಪ ತಮ್ಮ ಕಡಿಂದ ೫೦೦ ರೂಪಾಯಿ ಪಡದಾನ ಅಂದ ಹಾಗಾತು.

ರಾಮು—ಅದು ಸ್ಪಷ್ಟನ್ನ ಅದ. ಯಾರು ಏನ ಹೇಳಬೇಕು?

ಚೆ—ಐನೂರು ರೂಪಾಯಿ ಎಲ್ಲಿರಿ? ರಾಮಣ್ಣ ಲೆಕ್ಕ ಪಾರಿತಾಗಿ ನೋಡರಿ.

ವೆಂ—ಕಾಗದಪತ್ರ ಇದ್ದಮ್ಯಾಲ ಅವನ್ನ ಸರಿಯಾಗಿ ಹೇಳೋದು ಲೇಸಲ್ಲ?

ರಾಮು—ಅಂದರ ನನಕಿಂತ ಆ ಚೆನ್ನನ ಮಾತಿನಮ್ಯಾಲ ವಿಶ್ವಾಸ ಏನು?

ನೀಲ—ವಿಶ್ವಾಸ ಕಾಗದ ಪತ್ರಗಳ ಮ್ಯಾಲ ಅಂತ ಹೇಳಬಹುದು.

ಕೃ—ಇದೋನೋ, ನಿಮ್ಮೆಲ್ಲರ ಮಾತು ಕೇಳಿದರ, ನನ್ನಮ್ಯಾಲ ಅವಿಶ್ವಾಸ ಇಟಗೊಂಡು ಬಂದೀರಿ ಅಂತ ಕಾಣಿಸತದ. (ತ್ವೇಷದಿಂದ) ಏ ನೀಲಕಂಠರಾಯ, ನನಗೇನು ನಿನ್ನಂತೆ ಎರಡನೆಯವರ ಮನೀ ಮುಣಿಗಿಸೋದು ಬೇಕಾಗಿಲ್ಲ. ನನಗ ದೇವರು ಬೇಕಾದಷ್ಟು ಕೊಟ್ಟಾನ. ಐನೂರು ಅಲ್ಲ. ಇನ್ನ ಸಾವಿರ ರೂಪಾಯಿ ಬೇಕಾ ದರೂ ದಾನ ಕೊಟ್ಟೇನಂತ. (ನೀಲಕಂಠರಾಯನು ಮೋರೆ ಕೆಳಗೆ ಹಾಕಿ ಕೊಂಡು ಖಿನ್ನನಾಗಿ ಮಂಕು ಬಡಿದಂತೆ ಕೂಡುವನು.) ಆಚಾರ, ತಿಳದ ಹಾಂಗ ಆತೆಲ್ಲ ನಿಮ್ಮ ಎಲ್ಲಾರ ಸ್ವರೂಪ. ನಾ ಹೇಳಿದರೂ ನೀವು

ಕೇಳೋದಿಲ್ಲ. ಕೆಸರಾಗ ಕಲ್ಲಹಾಕಿ ಮಾರೀಗೆ ಕೆಸರು ಸಿಡಿಸಿಕೊಂಡ ಹಾಂಗ ಅದ, ಈ ಜನರ ಸಹವಾಸ.

ವೆಂ—ನೀನು ಅನ್ನೋದು ನಿಜ ಅಂತ ಒಪ್ಪಿಕೊಳ್ಳೋದಕ್ಕ ಯಾವ ಅಭ್ಯಂತರ ಇರಬಾರದು ಅನ್ನು. ಆದರ ನೀನು ಸ್ವಲ್ಪ ಶಾಂತನಾಗಿ ಕೂತರ ನಾನೆಲ್ಲ ಹದಕ್ಕ ತರತೀನಿ. ಇಲ್ಲಿ ನೋಡು ಚೆನ್ನಪ್ಪ. ನಿನ್ನ ಲೆಖ್ಖದಿಂದ ಆ ಹೊಲದವ್ನ್ಯಾಲೆ ಎಷ್ಟು ರೂಪಾಯಿ ಇಸ ಕೊಂಡದ್ದು?

ಚೆ—ಎಡ್ಡ ನೂರು ಎಪ್ಪ! ಅದರಾಗ ಎಪ್ಪತ್ತು ರೂಪಾಯಿ ತಿರಗಿ ಕೊಟ್ಟೇನಿ.

ಕೃ—ಎರಡು ನೂರಂತೂ ನಾನು ಸ್ವತಾನೇ ಕೊಟ್ಟೇನಿ. ರಿಜಿಸ್ಟರಿ ವ್ಯಾಳ್ಯಾಕ ರಾಮಣ್ಣನ ಕಡಿಂದ ಎರಡು ನೂರು ಕಳಸೀನಿ.

ರಾಮು—ಮತ್ತ ನಿನ್ನ ಹೊಲದ ಸಾಗವಳಿ ರಕಮಿನ ಪೈಕಿ ನೂರು ರೂಪಾಯಿ ಬಾಕಿ. ಬಡ್ಡಿ ಅಂತೂ ಬ್ಯಾರೇನ ಅದ.

ಚೆ—ಟಾಂಪು ಬರೆಸಿಗೊಂಡಾಗ ರೂಪಾಯಿ ಯಾರು ಕೊಟ್ಟಾರ ಎಪ್ಪ?

ಕೃ—ಯಾಕೋ ರಾಮಣ್ಣ?

ರಾಮು—ನೀವು ನಂಬರಿ ಬಿಡರಿ ರಾಯರ! ರಸೀದಿ ನಿಮಗ್ಙ ತಂದು ಕೊಟ್ಟೇನಲ್ಲ! ಕಾಗದಪತ್ರ ಸಂಗಡ ನೀವು ಸ್ವತಃ ನಿಮ್ಮ ಕೈಲೇ ತಗದಿಟ್ಟೇರಿ.

ಸದಾ—ಅಂತೂ ಈ ವ್ಯವಹಾರ ಸರಿಯಾಗಿ ನಡದಹಾಂಗ ಕಾಣಿಸೋದಿಲ್ಲ. ರಾಯರ ತಾವು ಸಿಟ್ಟಾಗಬಾರದು. ಅವನು ಬಡವ. ಹಣ ರಾಮು ದೇವರದು. ಈ ಬಗ್ಗೆ ತಾವು ಇನ್ನೊಮ್ಮೆ ವಿಚಾರ ಮಾಡಬೇಕು.

ವೆಂ—ಈಗ ಅಂಥ ಪ್ರಸಂಗ ಬಂದದ್ದರ ಏನು? ಹೊಲಾ ಚೆನ್ನಪ್ಪನ ವಶದಾಗ ಅದ. ಅವಗ ನಿಜವಾಗಿ ಕೊಟ್ಟ ಹಣಾನ ತಿರುಗಿ ತೆಗೆದು ಕೊಳ್ಳೋ ಬಗ್ಗೆ ಯಾವ ಉಪಾಯ ಕೈಕೊಳ್ಳಬೇಕು ಎಂಬೋದನ್ನ ದೇವಸ್ಥಾನ ಸಮಿತಿ ಸದಸ್ಯರು ನೀವು ನಿರ್ಧರಿಸಿದರ ಸರಿಯಾಗ ಲಿಕ್ಕಿಲ್ಲೇನು?

ಕೃ—ಹಣ ಕೊಟ್ಟವ ನಾನು. ಇಸಗೊಂಡವ ಚೆನ್ನ. ಇದರೊಳಗ ಯಾರೂ ತಲಿಹಾಕೋದು, ಅಧಿಕ ಪ್ರಸಂಗತನ ಮಾಡೋದು ಬೇಕಿಲ್ಲ.

ನೀಲ—ಅಂಪರ ಆ ಹೊಲ ದೇವರದು ಅಲ್ಲ ಅಂದ ಹಾಂಗ ಆತೇನು ?

ಸದಾ—ಅಲ್ಲಿಂದ ರಾಯರು ರಾಮದೇವರಿಗೆ ದಾನವಾಗಿ ಕೊಟ್ಟ ೫೦೦ ಎಲ್ಲಿ ಅವ, ಅಂಬೋ ವಿಷಯ ಹಾಗೇ ಉಳಿದು ಬಿಡುತದ.

ಕೃ—ನಾನು ನಿಮ್ಮ ಸಂಗಡ ಈ ವಿಷಯ ಚರ್ಚಿಸಲಿಕ್ಕ ಸಿದ್ಧನಾಗಿಲ್ಲ

ಸದಾ—ಅಂತೂ ವಿಷಯ ಸ್ವಲ್ಪ ಗಡಚಾಗೇದ. ರಾಯರು ತಾವು ದಾನ ಕೊಟ್ಟ ೫೦೦ ರೂಪಾಯಿಯಿಂದನ ಆ ರಾಮದೇವರ ಹೊಲಾ ಅನ್ನೋದನ್ನ ಕೊಂಡೇವಿ ಅಂತ ಒಪ್ಪಿಕೊಂಡಾರ. ಆದರ ಈಗ ಅಲ್ಲ ಅಂತ ಅನ್ನೋದಕ್ಕ ಆಧಾರ ಏನಾದರೂ ಇರಬಹುದಾದರ ಆ ಕಾಗದ ಪತ್ರಗಳು ಮಾತ್ರ. ಒಂದು ವೇಳೆ ಹೊಲಾ ಸ್ವಂತಕ್ಕಾಗಿ ಕೊಂಡಿದ್ದರ ನಮಗ ಆ ವಿಷಯ ಕೇಳೋದಕ್ಕ ಅಧಿಕಾರನ ಇಲ್ಲ. ಆ ೫೦೦ ರೂಪಾಯಿ ಮಾತ್ರ ದೇವಸ್ಥಾನ ಸಮಿತಿಗೆ ಸಂಬಂಧಿಸಿದ್ದು.

ವೆಂ—ರಾಮಣ್ಣಾ ! ಕಾಗದಪತ್ರ ಈಗ ತೋರಿಸಿ ಬಿಡಬಹುದಲ್ಲ !

ರಾಮ—ತೋರಿಸೋದಕ್ಕ ಅಲ್ಲ ಈಗ ಮಾತು. ಅಲ್ಲ, ನೀವು ನಂಬರಿ ಬಿಡರಿ. ನಮ್ಮವರು ನಮ್ಮವರು ಅಂತ ಬಾಯಲೆ ಅಂಬೋದು, ಮ್ಯಾಲೆ ಈ ಅಪನಂಬಿಗಿ ಅಪಮಾನ ರಾಯರಿಗೆ ಮಾಡೋದು, ಎಂಕಪ್ಪಾಚಾರ ! ನನಗಂತೂ ಮನಸ್ಸಿಗೆ ಬರೋದಿಲ್ಲ.

ಕೃ—ರಾಮಣ್ಣ ಆಚ್ಯಾರಿಗೆ ಹುಚ್ಚು ಹಿಡಿದ್ಯದ. ಈ ತುಂಟ ಸೂಳೀಮಗ ಚನ್ನನ ಬದ್ಮಾಷಗಿರಿ ಇವರಿಗೇನು ಗೊತ್ತು ? ನೀಲಕಂಠರಾಯನ ವಿಷಗಂಟಕತನ ನಾನೊಂದು ಎಪ್ಪತ್ತ ಸಾರೆ ಆಚಾರ ಮುಂದೆ ಹೇಳೀನಿ. ಇಂಥವರು ಜಾತ್ರಿಗೆ ಸಹಕಾರ ಮಾಡತಾರಂತ. ಹನಮನ ಮುಂದ ಹಾರಲೆ ಗುಬ್ಬಿ ಅಂದರಂತ. ನನ್ನ ಮುಂದ ಇವೆಲ್ಲ ಆಟ

ನಡೀಲಿಕ್ಕಿಲ್ಲ. ನಮ್ಮ ಈ ಆಚ್ಯಾರಿಗೆ ಅಂದರ ಧರ್ಮಶ್ರವಣ ಹೇಳಿ ಟೊಪಿಗಿ ಹಾಕಬಹುದು.

ವೆಂ—ರಾಮಣ್ಣ! ಒಕ್ಕಿ ಮಾತಿಲೆ ಆ ಕಾಗದಪತ್ರ ತೋರಿಸತಿಪ್ಪೊ ಇಲ್ಲೊ ?

ಚೆ—ಎಪ್ಪಾ! ಯಾಕ ಸುಮ್ಮನ ರಸಕಸಿ ? ಒಲಾ ಕೊಟ್ಟರ ಕೊಡಲಿ. ಬಿಟ್ಟರ ಬಿಡಲಿ. ಶಿವಾ ಎಲ್ಲಾರ್‍ಯರ ಒಟ್ಟೇಗ ಕೊಟ್ಟಾನಂತ.

ಕೃ—ಎಹೇಹೇ ಲುಚ್ಚಾ! ಈ ಹಗರಣ ಬ್ಯಾರೆ ಸುರಸ್ತಾನ. ಮಚ್ಚೀಲೆ ಹೊಡೀಬೇಕು ನಿನಗ. ನೀಚ ಜಾತಿ ಎಲ್ಲೋ!

ಚೆ—ಔದ ಎಪ್ಪ! ನೀಚ ಜಾತಿ ಅಂತ ಮತ್ತೆ ಕೂಳಿಲ್ಲದ ಸಾಯಕೊಲ್ಲ ತಾನ ದೇವರು ನಮ್ಮನ್ನ.

ಕೃ—ಹೂಂ! ತಲೀಮ್ಯಾಲ ಕೋಡು ಮೂಡ್ಯಾವೋ ನಿನಗೀಗ. ಮಾತು ನೋಡು ಎಂಥೆಂಥಾವ ಆಡತಾನ? ಬಡ್ಡೀ ಮಗ. ಮನೆಮುರಕ ಲೌಡೀ ಮಗ.

ಚೆ—(ಕೆರಳಿ) ಮತ್ತೆ ಏನಾರ ಅನ್ನು ಎಪ್ಪ. ಮನಿಮುರಕ ಅಂತ ಮಾತ್ರ ಅನಬ್ಯಾಡ ದಣಿ. ನಾನು ಮನಿಮುರ್‍ಯೊ ಕೆಲಸಾ ಈ ಜಲಮದಾಗಂತೂ ಮಾಡಿಲ್ಲ. ಇಂದಿನ ಜಲಮದಾಗ ಏನಮಾಡಿದ್ನೋ ಏನೋ, ಈಗ ನನ್ನ ಮನೀನ ಮುರಿದು ಮೂರಾಬಟ್ಟೆ ಆಗಾಕ ಅತೈತಲ್ಲ ಅಂತ ಮಿಡಕತೀನಿ.

ಕೃ—(ಪಕ್ಕದಲ್ಲಿದ್ದ ಚಡಿಯನ್ನು ತೆಗೆದುಕೊಂಡು) ನೀಚ ಸೂಳೇ ಮಗನೆ, ತಿರತಿರಗಿ ಅಂತೀದ್ಯಾ? (ಎದ್ದು ಅವನಿಗೆ ಹೊಡೆಯ ಹೋಗುವನು. ಮತ್ತೆ ಏನೋ ನೆನಪಾದಂತೆ ಗಕ್ಕನೆ ನಿಂತು ಆ ಚಡಿಯನ್ನು ಅವನ ಮೇಲೆ ಬೀಸಿ ಒಗೆಯುವನು. ಸದಾಶಿವಯ್ಯ ಅಡ್ಡಬರುವನು. ಅದು ಅವನ ಹುಬ್ಬಿಗೆ ಬಡಿದು ತುಸು ರಕ್ತ ಚಿಮ್ಮುವುದು. ಅವನ ಕಣ್ಣಿಗೆ ಕತ್ತಲು ಬಂದಂತಾಗಿ ಬೀಳುತ್ತಿರಲು ವೆಂಕಪ್ಪಾಚಾರ್ಯರು ಹಿಡಿದುಕೊಳ್ಳುವರು. ಎಲ್ಲರೂ ದಿಗ್ಗನೆ ಎದ್ದು ನಿಲ್ಲುವರು.)

ವೆಂ—ಅಯ್ಯೋ! ಇದೇನು ಅನಾಹುತ ಆಯಿತು ?

ನೀಲ—( ಎದ್ದುನಿಂತು ) ನಡೀ ಚೆನ್ನಪ್ಪ. ಮಾಸ್ತರನ್ನ ದವಾಖಾನಿಗೆ ಕರ್ರ ಕೊಂಡ ನಡೀರಿ. ಕೊನಿಗೆ ನಾನು ಅಂದುಕೊಂಡಂತೆ ಆತು. ಬರತೀನಿ. ನಮಸ್ಕಾರ ಆಚಾರ!

(ಚನ್ನಪ್ಪ ಮುಂದೆ ಹೋಗುವನು. ಸದಾಶಿವಯ್ಯನನ್ನು ಡಾಕ್ಟರು ಕಂಕುಳಲ್ಲಿ ಕೈಹಾಕಿಕೊಂಡು ಕರೆದುಕೊಂಡು ಹೋಗುವರು. ಕೃಷ್ಣರಾಯನು ದಿಙ್ಮೂಢನಾಗಿ ಎರಡೂ ಕೈಗಳಲ್ಲಿ ತಲೆ ಇಟ್ಟು ಕುರ್ಚಿಯ ಮೇಲೆ ಕೂಡುವನು.)

ವೆಂ—(ರಾಮಣ್ಣನನ್ನು ಸಮೀಪಕ್ಕೆ ಕರೆದು) ನೀನು ಆ ಕಾಗದ ಪತ್ರಗಳನ್ನ ತಂದು ಬಿಟ್ಟಿದ್ದರ ಇಷ್ಟು ರಂಧೀನೆ ಆಗತಿದ್ದಿಲ್ಲ.

ರಾಮು—ಅವು ಕಡೀಕೆ ಇಲ್ಲರಿ. ನೆಲಮನಿ ತಿಜೋರಿಯೊಳಗ ಇಟ್ಟಾರ ರಾಯರು!

ಕೃ—(ಎಚ್ಚತ್ತವನಂತೆ) ನೆಲಮನಿ ತಿಜೋರಿವಳಗ ಅವ ಏನು! ನೀನು ಆಗಲೇ ಯಾಕ ನೆನಪು ಮಾಡಲಿಲ್ಲ?

ರಾಮು—(ರಾಯರ ಕಿವಿಯಲ್ಲಿ ಏನೋ ಹೇಳುವನು) ಅಂದರ ಸರಿಹೋಗತದ.

ಕೃ—ಎಂಕಪ್ಪಾಚಾರ! ಆ ಮಾಸ್ತರನ್ನ ಇನ್ನೊಮ್ಮೆ ಕಂಡು ಹೇಳರಿ. ಜಾತ್ರಿ ಆದಮ್ಯಾಲ ಕಾಗದ ಪತ್ರ ತೋರಿಸತದ ಅಂತ. ನಿಮಗಂತೂ ಗೊತ್ತsa ಆದ. ನೆಲಮನಿ ಬಾಗಿಲು ಪ್ರತಿಪದಾದ ಹೊರತು ತಗಿಯೋ ಹಾಂಗಿಲ್ಲ.

ವೆಂ—ಅಯ್ಯೋ ಹೌದಲ್ಲ! ಈ ವಿಷಯ ಆಗಲೇ ಹೇಳಿದ್ದರ.

ಕೃ—ಒಳ್ಳೇದು ಈಗೇನಾಯಿತು. ನೀವು ಈಗಲೇ ಹೋಗಿ ತಿಳಸರಿ. ಜಾತ್ರಿಯೊಳಗ ಇಲ್ಲದ ರಸಕಸಿ ಗಡಿಬಿಡಿ ಆಗಬಾರದು. ಸ್ವಲ್ಪ ನೀವು ಇತ್ತಕಡೆ ಕಾಳಜ ತಗೋಳರಿ.

ವೆಂ—ಆಗಲಿ. ಪ್ರಯತ್ನ ಮಾಡತೀನಿ. ಈಶ ಇಚ್ಛೆ. ಏನೇ ಆದರೂ ನೀನು ಮಾತ್ರ ಸ್ವಲ್ಪ ಸಮಾಧಾನ ಗುಣ ತಂದುಕೊಂಬೋದು ಈಗಿನ ವ್ಯಾಳ್ಯಾದಾಗ ಅಗತ್ಯ ಆದ. ಒಳ್ಳೇದು ನಾನು ಹೋಗತೀನಿ.

ಕೃ—(ಎದ್ದುನಿಂತು) ನಮಸ್ಕಾರ. ನಾಳಿಗೆ ಸಾಯಂಕಾಲ ಬರ್ರಿ. ಅಂ.

ವೆಂ—ನಮಸ್ಕಾರ. ಆಗಲಿ. (ಹೋಗುವರು.)

ರಾಮು—ಅಲ್ಲ! ಇವೊತ್ತ ಒಮ್ಮೆಲೇ ಈ ಮಂದೀನ ಹೀಂಗ ಯಾಕ ನೆರಸ ಬೇಕಾಗಿತ್ತು? ನನಗ ಸ್ವಲ್ಪ ಮೊದಲೇ ಗೊತ್ತಾಗಿದ್ದರ........

ಕೃ—ನನಗಾರ ಎಲ್ಲಿ ಗೊತ್ತಿತ್ತೋ ಇವರೆಲ್ಲ ಈ ಹೊಲದ ದಶಿಂದ ಇಷ್ಟು ರಗಳೀ ಮಾಡತಾರಂತ. "ಸೀನಗ ಇಷ್ಟು ಸಮಾಧಾನ ಮಾಡೋದಕ್ಕ, ಈ ಮಂದೀನ ಜಾತ್ರೀ ಕೆಲಸದಾಗ ಕಲಸಿಕೊಳ್ಳೋಣ, ಚನ್ನಗ ಬುದ್ಧಿ ಹೇಳೋಣ, ಇದರಿಂದ ಸೀನ ಸೆಟಗೊಂಡ ತಿರಗಾಡೋದಾದರೂ ಕಡಮಿ ಆದೀತು" ಅಂತ ಆಚಾರ್‍ರು ಅಂದರು. ನಾನು ಅದಕ್ಕ ಹೂಂ ಅಂದಿದ್ದೆ.

ರಾಮು—ನೀವು ನಂಬರಿ ಬಿಡರಿ. ಸೀನಣ್ಣ ಬಹಳ ಸರಳ ಮನುಷ್ಯ. ಆತಗ ಬೋಧನೆ ತುಂಬೋರು ಅಂದರ ಈ ಮಾಸ್ತರು, ಆ ಚೆನ್ನ.

ಕೃ—ಮತ್ತೆ ನೀಲಕಂಠರಾಯೇನು ಕಡಮಿ ಇದ್ದಾನ?

ರಾಮು—ಡಾಕ್ಟರು ಇಷ್ಟು ಮುಂದ ಹೋಗವರಲ್ಲ. ಆದರೂ ಇವರ ಚರ್ಯೆಗಳಿಗೆಲ್ಲ ಆಶೀರ್ವಾದ ಕೊಡತಾರ. ನೀವ ಏನ ಅನ್ನರಿ. ಚೆನ್ನಗ ನಾವು ಹೀಂಗೇ ಬಿಟ್ಟವಿ ಅಂದರ ಅವಾ ಮತ್ತಿಷ್ಟು ತಲಗೇರತಾನ. ಊರಾಗ ನಿಮ್ಮದು ನಮ್ಮದು ಏನೂ ಕಿಮ್ಮತ್ತs ಉಳಿಲಿಕ್ಕಿಲ್ಲ. ಇವೊತ್ತು ಅವಾ ಆಡಿದ ಮಾತು ನೋಡಿದಿರಿಲ್ಲೋ?

ಕೃ—ಹೌದು ಮಾಡಬೇಕೇನು?

ರಾಮು—ನಾಳೆ ಮುಂಜಾನೆ ನಾನೆಲ್ಲ ಯೋಚನಿ ಮಾಡಿಕೊಂಡು ಬರತೀನ್ರಿ. ಅಷ್ಟು ಹೊತ್ತಿಗೆ ಆಚಾರ್‍ರು ಬರತಾರ. ಕೊನೇ ನಿರ್ಧಾರ ಆಮ್ಯಾಲ ಮಾಡೋಣ. ನಾನು ಬರತೀನಿ. ನಮಸ್ಕಾರ. (ಹೋಗುವನು.)

— ತೆರೆ —

## ೫ನೆಯ ಪ್ರವೇಶ

( ಕೃಷ್ಣರಾಯರ ಮನೆ, ಮಾರನೆಯ ದಿನ ಮಧ್ಯಾಹ್ನ ಕೃಷ್ಣರಾಯರು ಓದುತ್ತ ಕುಳಿತಿದ್ದಾರೆ. )

ರಾಧಾ—(ಪ್ರವೇಶಿಸಿ) ಹಂಗಾರ ಅವಲಕ್ಕಿ ಮೇಲೆ ಮುಗಸತೀರ್ಯಾ?

ಕೃ—ಆಗಲಿ.

ರಾಧಾ—ಅಲ್ಲ. ಈ ಹೊಲದ ವಿಷಯ ಯಾಕ ಇಷ್ಟು ದೀರ್ಘಕ್ಕ ತಂದು ಹಚ್ಚೋದು? ಮೊದಲ್ಲ ಜನರೊಳಗ ಎಗ್ಗ ಆಗಿ ಕೂತೀವಿ. ಚನ್ನನ ಹೊಲಾ ತಿರಗಿ ಕೊಟ್ಟರ ಆತೆಲ್ಲ.

ಕೃ—ಹೂಂ. ಹೂಂ! ನನಗೂ ತಿಳಿತದ. ಕಿವ್ಯಾಗ ತುತ್ತು ಇಡೋದಿಲ್ಲ ನಾನು. ಏನಮಾಡಬೇಕಾಗೇದ ಅಂಬೋದನ್ನ ನಮ್ಮಲ್ಲಿ ಬಂದು ಆಪ್ತಾಲೋಚನೆ ಮಾಡಬೇಕೊ? ಏನು ನಮಗ ಬ್ಯಾಡ ಆದವರಲ್ಲಿಗೆ ಹೋಗಿ, ನಮ್ಮನ್ನ ಇನ್ನಷ್ಟು ಕೆಳಗ ಇಳಿಯೋ ಹಾಂಗ ಮಾಡ ಬೇಕೊ, ನಿನ್ನ ಮುದ್ದಿನ ಅಳಿಯ?

ರಾಧಾ—ನೀವೇ ಕರಿಸಿ ತಿಳಿಸಿ ಹೇಳಿದರ ನೆಟಗಾಗಲಿಕ್ಕಿಲ್ಲ.

ಕೃ—ಅಂವಗ? ಸಂಣತನದಿಂದ ವಿಷಾಕಾರತಿರೋ ಆ ನೀಲಕಂಠರಾಯ, ಆ ಹೊಲೆಯ ಚೆನ್ನ, ಆ ರಾಮಪ್ಪರದ ಗೌಡ, ಅವರೇ ಅವಗ ಹಿತ ಚಿಂತಕರಾಗ್ಯಾರ. ಇಂಥವರಾಗ ಅವನ್ನ ಕರಿಸಿ ಹೇಳಿದರ ಅವನ ಕಡಿಂದ ನಾಕಮಾತು ಅನಿಸಿಕೊಂಬೋದೇ ಆಗತದ ಹೊರತು ಮತ್ತೇನಿಲ್ಲ. ನೀನೇ ಬೇಕಾದರ ಕರಸಿಹೇಳು.

ರಾಧಾ—ನನ್ನ ಮಾತು ನಡಿಯೋ ಹಾಂಗ ಇದ್ದರ ಹೀಂಗ ಎಲ್ಲಿ ಆಗತಿತ್ತು. ಮನಿಗೆ ಬಾ ಅಂತ ಅಂಗಲಾಚಿ ಬೇಡಿಕೊಂಡು ಬಂದೆ. ಆದರ ಅವಾ ಹೇಳಿದ್ದಾಂಗ ಮಾಡೋದು ಒಂದೂ ನನ ಕೈಯಾಗ ಇಲ್ಲ ಮನೀಗೆ ಬರೋದು ಬಿಟ್ಟೇನಿ ಅಂತ ನನವ್ಯಾಲಿನ ಜವಾಬ್ದಾರಿನೂ ಮರತೀನಿ ಅಂತ ತಿಳಿಬ್ಯಾಡ, ಎಲ್ಲಾ್ಯರ ಕೆಲಸಾ ಸಿಗಲಿ, ನಿನ್ನ ಹರಕಿ

ಕೈಗೂಡಸತೀನಿ ಅಂತ ಖಂಡತುಂಡ ಹೇಳಿಬಿಟ್ಟೆ. ನಿನ್ನೆ ರಾತ್ರಿ ನಾ ಹೋದಾಗ.

ಕೃ—ಅಂದಮ್ಯಾಲ ಅಂವಾ ಇನ್ನ ಈಗ ನನ್ನ ಮಾತು ಕೇಳೋ ಸ್ಥಿತಿಯೊಳಗ ಇದ್ದಾನಂತೀಯೇನು?

ರಾಧಾ—ನೀವು ಸ್ವಲ್ಪ ಸಮಾಧಾನದಿಂದ ಆತಗ ತಿಳಿಸಿ ಹೇಳಿದರ.

ಕೃ—ಹೌದೇ! ಸಮಾಧಾನ, ಸಮಾಧಾನ. ಆ ಆಚಾರ ಅದೇ ಅಂತಾರ. ನೀನೂ ಅದನ್ನ ಪಾಠ ಮಾಡು. ಜಗತ್ತಿನೊಳಗ ಇಲ್ಲದ ಸಮಾಧಾನ ಎಲ್ಲಾ ನನ್ನಲ್ಲೇ ಬರಬೇಕು ಅಂತೀರಿ ನೀವೆಲ್ಲಾ. ಅಲ್ಲ, ಆವಗ ಬುದ್ಧಿಮಾತು ಹೇಳಿದರ ಮುಸಿಬಿಟ್ಟು ಎದ್ದುಹೋದ. ಈಗ ಬಂದಾವ ಮುಂದೀ ಮನಿಯೊಳಗ ಸೇರ್ಯಾನ. ಬಂದ ಮರುದಿವಸನ್ನ ನನ್ನ ಮರ್ಯಾದಿ ಹೋಗೋ ಹಾಂಗ ಕಾರಸ್ಥಾನ ನಡಸ್ಯಾನ. ಏನು? ಮನೀಗೆ ಬರೋದು ಬಿಟ್ಟಾನು ಹೌದಲ್ಲೋ! ಸುಮಿತ್ರಾ ನನಗೊಬ್ಬ ಗಂಡಸಮಗ ಅಂತ ತಿಳದು ಮನಿಯೊಳಗ ಇಟುಕೊಂಡೇನಂತ. ಆ ಚಂಡಾಲನ ಕೈಯೊಳಗೇನ ಕೊಡಲಿಕ್ಕಿಲ್ಲ.

ರಾಧಾ—(ಗಾಬರಿಯಾಗಿ) ಅಯ್ಯೋ! ಹಾಂಗ ಅನಬ್ಯಾಡರಿ. ನನ ಕೈಯಾಗಿನ ಒಂದು ಭಂಗಾರ ಬಳಿ ಆದರ ಕೊಡತೀನಿ ಅಂತ. ಅವನ ಹೊಲದ ರೂಪಾಯಿ ದೇವರಿಗೆ ಕೊಟ್ಟು, ಹೊಲಾ ತಿರುಗಿಕೊಟ್ಟು ಬಿಡರಿ.

ಕೃ—ಓಹೋ! ಅಂದರ ನಾನು ಭಿಕಾರಿ ಆಗೀನಿ ಅಂತ ನಿನ್ನ ಕಲ್ಪನಾ ಏನು? ಈ ನಿನ್ನ ಭಂಗಾರದ ಬಳಿ, ಹೋದ ಮರ್ಯಾದೀನ ತಂದು ಕೊಡಲಾರದು. ತಿಳಿತಿಲ್ಲೋ.

ರಾಧಾ—ಅಯ್ಯೋ ಮರ್ಯಾದೇ! ಹುಡಿಗಿಕಿಂತ ಹೆಚ್ಚಿಗೆ ಏನದ?

ಕೃ—ನೀನು ಒಬ್ಬಾಕೇ ಹಡದೀದಿ ನೋಡು ಹುಡಗೀನ್ನ! ನಾನು ಆಕಿಗೆ ತಂದೀನೇ ಅಲ್ಲ ಪಾಪ! ನನಗ ಅಂತಃಕರಣನೇ ಇಲ್ಲ!

ರಾಧಾ—ಅಲ್ಲ ಮತ್ತ .......

ಕೃ—ಏನು ಮತ್ತ! ಏನ ಮುತ್ತಿಲ್ಲ ಮುಗದೊಂದಿಲ್ಲ. ಆ ರಾಮಪೂರದ ಕುರುಬ, ಅಂವಾ ಗೌಡಗ, ಆ ಮೊಲೆಯ ಚೆನ್ನಿಗ ತೋರಿಸಬೇಕಾಗೇದ ನಾನು ಏನ ಮಾಡಬಲ್ಲೆ ಅನ್ನೋದನ್ನ. ಅಲ್ಲಿಂದ ನಿನ್ನ ಮುದ್ದಿನ ಅಳಿಯನ ಕಣ್ಣು ತಗಿತದ.

ರಾಧಾ—(ಅಳುವ ದನಿಯಲ್ಲಿ) ಅಷ್ಟು ಆಗೋದರೊಳಗಾಗಿ ಆತನ ಮನಸ್ಸು ಇನ್ನಷ್ಟು ಕಲ್ಲ ಆಗಿ, ಇಲ್ಲದ ಅನಾಹುತ ಆದೀತಲ್ಲ. ನಿಮಗ ಹ್ಯಾಂಗ ತಿಳಸಲಿ.

ಕೃ—ಅದೆಂದು ಕಲ್ಲ ಆದರ ನಂದು ವಜ್ರ ಆಗತದ.

ರಾಧಾ—(ಅಂಗಲಾಚಿ) ನಿಮಗ ಕಾಲ ಬೀಳತೀನಿ ಮಹರಾಯರ. ಹಾಂಗ ಮಾಡಬ್ಯಾಡರಿ. ಜಾತ್ರಿ ಒಳಗಾಗಿ ಅದನ್ನಿಷ್ಟು ದಯಮಾಡಿ ಬಗಿಹರಿಸಿಬಿಡರಿ. ಜಾತ್ರಿ ವಳಗ ಇಷ್ಟು ನಕ್ಕೋತ ಕೆಲಕೋತ ಇರೋಣ. ಅಲ್ಲಿಂದ ಶೀನಪ್ಪನ ಮನಸ್ಸು ತಿಳಗಬಹುದು.

ಕೃ—(ನಿಟ್ಟುಸಿರುಗರೆದು) ನಗೋದು ಕೆಲಿಯೋದು ನನ್ನ ಜೀವನದೊಳಗ ಇಲ್ಲೇ ಇಲ್ಲ, ತಿಳೀತ್ಯ! ನಿನ್ನ ನಗೋದು ಕೆಲಿಯೋದಕ್ಕಿಂತ ಮರ್ಯಾದಿ ನನಗ ಹೆಚ್ಚ ಅದ. ಮಾನ ಮರ್ಯಾದಿ ಕಳಕೊಂಡು ಬದಕಿ ಇದ್ದರೇನು, ಸತ್ತರೇನು?

ರಾಧಾ—ಅಂಥಾದೇನಾಗೇದ ಈಗ?

ಕೃ—ಇಕಾ, ನನ್ನ ಯಾಕ ರೇಗಿಸತೀದಿ? ಸುಮ್ಮನೆ ಒಳಗ ಹೋಗು. ನನ್ನ ಪಾಡಿಗೆ ನನ್ನ ಬಿಡು. (ತ್ರಾಸದಿಂದ) ನನಗ ಗೊತ್ತದ ನನ್ನ ಪಾಲಿಗೆ ಯಾರೂ ಇಲ್ಲಂತ. ನನ್ನ ಜನರು ಅಂತ ಅನ್ನೋವರು ನನಗ ಯಾರೂ ಇಲ್ಲ. ನಡಿ ನಡಿ, ಯಾಕ ನಿಂತಿ.

ರಾಧಾ—(ವಿಷಣ್ಣಳಾಗಿ ಗೊಂಬೆಯಂತೆ ನಿಲ್ಲುವಳು.)

ರಾಮು—(ಪ್ರವೇಶಿಸಿ) ರಾಧಕ್ಕ, ಅಕ್ಕಿ ಹಸನ ಮಾಡಲಿಕ್ಕೆ ಕೂಲಿಯವರು ನಾಳಿಗೆ ಬರತಾರಂತ. (ರಾಧಾಬಾಯಿ ಒಳಗೆ ಹೋಗುವಳು.)

ಕೃ—ಎಷ್ಟು ತೀವ್ರ ಬಂದೆಲ್ಲೋ ರಾಮಣ್ಣ? ಸಾಯಕಲ್ಲವ್ಯಾಲೆ ಹೋಗಿದ್ದೇನು?

ರಾಮು—ಹೌದು, ರಾಯರ........(ತಲೆ ತುರಿಸುತ್ತ) ರಾಮಪೂರದ ರುದ್ರಗೌಡನು ಇವತ್ತ ಇಲ್ಲಿಗೆ ಬಂದಾನ. ಹಕೀಮರ ಹತ್ತಿರ ಕೂತಿದ್ದ.

ಕೃ—ಹೂಂ! ಅವಂದೇ ಇರಬೇಕು ಅನ್ನು ಇದೆಲ್ಲಾ ಕಿಡಿಗೇಡಿತನ. ಬೆಂಕಿಹಚ್ಚಿ ನೋಡಕೋತ ಕೂಡ್ತಾವ ಅವ.

ರಾಮು—ರಾಯರ, ನೀವು ನಂಬರಿ ಬಿಡರಿ, ಈ ಜನರಿಗೆ ನಾವು ಅಂದರ ಏನೂ ಕಿಮ್ಮತ್ತು ಇಲ್ಲದ್ಹಾಂಗ ಆಗಿಬಿಟ್ಟದ. ಅಲ್ಲರಿ ರಾಯರ, ಎಂಥೆಂಥಾ ಮಾತು ಅಂವಾ ಆಡ್ಹೋವು, ಏನ ಕಥಿ? ಅದಕ್ಕ ಚನ್ನಗ ಇಷ್ಟು ಬಲ ಬಂದ್ವದ.

ಕೃ—ಏನು ಬೊಗಳತಾನೋ ಅಂವಾ?

ರಾಮು—ಬ್ಯಾಡರಿ, ಬಾಡರಿ ರಾಯರ. ನಾನು ಹೇಳಲಾರೆ. ನನ್ನ ಬಾಯಿಂದ ಅಂಥಾ ಮಾತು ಹೇಳಲಾರೆ.

ಕೃ—ಇರಲಿ ಹೇಳೋ, ಅಂಬೋದರ ಏನ ಅಂತಾನ?

ರಾಮು—ನೀವು ನಂಬರಿ ಬಿಡರಿ. ಆಮ್ಯಾಲೆ ನಾನೇ ತಮಗ ಹಚ್ಚತೀನಿ, ಚುಚ್ಚತೀನಿ ಅಂತ ಅಪಗೀರ್ತಿ ಬರತಾವರೀ. ಯಾಕಂತ ಸುಮ್ಮನೇ ಹೋಗಲಿ.

ಕೃ—(ರೇಗಿ) ಅಲೇ ಇವನ! ನೀನು ಸಾಕುಮಾಡೋ ಈ ರಗಳೀನ, ಸುಮ್ಮನೆ ಹೇಳಬಾರದ.

ರಾಮು—ಅಲ್ಲ ರಾಯರ, ನಮ್ಮೂರ ರಾಮದೇವರ ಗುಡಿಯೊಳಗ ನಮ್ಮದ್ದ ವ್ಯವಸ್ಥಾ ಇರೋ ಮುಂದ, ಈ ಬಡ್ಡೀಮಕ್ಕಳು ಪಂಚೇತಿ ನೆರಸತಾರಂತ. ಹಾಂ! ನೀವು ನಂಬರಿ ಬಿಡರಿ. ಇವರಿಗೆಲ್ಲಿಂದ ಬರತದರೀ ಅಧಿಕಾರ? ಆದರಾಗ ರಾಮದೇವರು, ಈ ನಿಮ್ಮ ಮನಿ ಕುಲಸ್ವಾಮಿ. ದೇವಸ್ಥಾನ ನಿಮ್ಮದು ಆಗಿರೋ ಮುಂದ.

ಕೃ—ಯಾರಿಗೆ ಅಷ್ಟು ಜಿಗರ ಅದನಪ್ಪ, ಪಂಚೇತಿ ನೆರಸೋದಕ್ಕ.

ರಾಮು—ನೀವು ನಂಬರಿ, ಬಿಡರಿ. ನಾನೂ ಅದ ಅಂತೀನಿ. ತಿರಗಿ ಮುರಗಿ ಆ ವಕೀಲ ವೆಂಕಟರಾಯನ್ನ ಇವರಿಗೆ ಮುಂದಾಳು. ಅದರಾಗ ನಮ್ಮ ಸೀನಣ್ಣನ್ನೂ ಕರಿಸಿಕೊಂಡಾರಲ್ಲ.

ಕೃ—ಹಾಂ! ಸೀನನ್ನ, ಇದರ ದಶಿಂದನ್ನ ಕರಿಸ್ಯಾರೇನು?

ರಾಮು—ಆಲ್ಲ ರಾಯರ, ಮತ್ತೆ ಬ್ಯಾರೆ ಅರ್ಥ ಏನದ ಹೇಳರಿ. ಈಗ ಅವರಿಗೆ ಇಲ್ಲಿಗೆ ಬರಲಿಕ್ಕೆ ಬ್ಯಾರೆ ಕೆಲಸಾದರೂ ಏನಿತ್ತರಿ?

ಕೃ—ಮಾಡಲಿ, ಮಾಡಲಿ. ನೋಡೋಣ. ಮಾಡತಾರೇನು? ರಾಮು ದೇವರಿಗೆ ದಾನಕೊಟ್ಟ ರೂಪಾಯಿ ಕೊಡು ಅಂದಾರು ಹೌದಲ್ಲೋ? ನಾನು ಈ ಸಾರೆ ಮುನ್ನೂರು ರೂಪಾಯಿ ಮುಡುಪು ತಗದಿಟ್ಟೇನಿ. ದೇವರಿಗೆ ಕೊಟ್ಟರಾತ್ಯಂತ, ಅಲ್ಲಿಂದ ನೋಡೋಣ. ಈ ಬಡ್ಡೀ ಮಕ್ಕಳು ಚೆನ್ನನ ಹೊಲ ಹ್ಯಾಂಗ ಉಳಸತಾರ ತಿಳೀತದ. ಅಲ್ಲಿಂದ ಈ ಸೀನ ಮಾರಿ ಒಣಗಿಸಿಕೊಂಡು ನನ್ನ ಹತ್ತರ ಬಂದರಾತಿಲ್ಲೋ?

ರಾಮು—ಇವರಿಗೆ ಇಷ್ಟು ಯಾಕ ಹೆದರೋದು?

ಕೃ—ಹೆದರಬೇಕು ಅಂತ ಯಾರಂದರು? ನಮ್ಮ ಬಂದೋಬಸ್ತಿ ನಾವು ಮಾಡಿಕೋಬೇಕು.

ರಾಮು—(ಕೈ ತಟ್ಟುತ್ತ) ಹಾಂ! ನೀವು ನಂಬರಿ ಬಿಡರಿ. ನಾನೂ ಅದೇ ಅಂತೀನಿ. ಆದರ ರಾಯರ್‍ನ ಸಾಲದ ರಕಮು ಕೊಡತದ, ಹೊಲಾ ಬಿಡಬೇಕು ಅಂತ ಅಂದರ.

ಕೃ—ಮುದಕ ಆಗಲಿಕ್ಕೆ ಬಂದಿ, ಅಂದರೂ ನಿನಗ ಬುದ್ಧಿ ಬರಲಿಲ್ಲೋ! ಅಲ್ಲೋ! ಹೊಲಾ ಖರೀದಿ ಆಗಿಹೋಗೇದ. ಸಾಗೋಳಿ ಪತ್ರ ಆಗೇದ. ಸಾಲಾ ಅಂತ ಬೊಗಳತೀದ್ಯಲ್ಲ!

ರಾಮು—ಹಾಂ. ಹಾಂ. ನಾನೂ ಅದೇ ಅಂತೀನಿ ರಾಯರ. ಖರೀದಿ ಆದಮ್ಯಾಲ ಕಬ್ಜಾ ............

ವೆಂ—(ಮೆಲ್ಲಗೆ ಪ್ರವೇಶಿಸಿ ಬಂದು ಕೂಡುವರು.)

ಕೃ—ಏನು ಆಚಾರ ಏನು ಸಮಾಚಾರ ನಿನ್ನೀದು ?

ವೆಂ—ನೀನು ಹೇಳಿದ ಪ್ರಕಾರ ಅವರಿಗೆಲ್ಲಾ ಹೇಳೀನಿ. ಆದರೂ ........

ಕೃ—ಆದರೂ ಅವರು ಕೇಳವಲ್ಲರು. ಜಾತ್ರಿ ವಳಗಾಗಿ ಇಲ್ಲ ಜಾತ್ರೀ ದಿವಸ, ಪಂಚೇತಿ ನೆರಸತೀವಿ ಅಂತಾರ ಹೌದಲ್ಲೋ ?

ವೆಂ—(ಗಾಬರಿಯಾಗಿ ರಾಮಣ್ಣನ ಕಡೆಗೆ ನೋಡಿ ಸಿಟ್ಟುಸಿರುಗರೆದು) ಶ್ರೀಹರಿ, ನಿನ್ನ ಚಿತ್ತಪ್ಪ.

ಕೃ—ಹೂಂ. ಅಂದರ ಏನ ಅಂತಾರ ? ತಂಟೆ ಹೂಡತಾರಂತೇನು ?

ವೆಂ—ಈ ವ್ಯವಹಾರಗಳೇನು ಹೊಸವ್ವ ಕೃಷ್ಣರಾಯ ನಿನಗ ? ನಿನಗೆಲ್ಲಾ ಗೊತ್ತದ ಅನ್ನು. ಏನೋ ನೀನು ಹೇಳೀದಿ ಅಂತ ನಾನು ಅವರಿಗೆ ಹೋಗಿ ಹೇಳಿದೆ. ಜಾತ್ರಿ ಒಳಗ ಗಡಿಬಿಡಿ, ರಸಕಸಿ ಆಗಬಾರದು ಅನ್ನೋದರ ಬಗ್ಗೆ ನನಕಿಂತ ಹೆಚ್ಚಿನ ಕಾಳಜಿ ನಿನಗ ಅದ.

ಕೃ—ಗಡಿಬಿಡಿ ! ರಸಕಸಿ ! ನೋಡೋಣ. ನೋಡೋಣ, ಆಚಾರ. ಒಟ್ಟು ಆ ಜನ ಏನಂದರು ?

ವೆಂ—ಏನೂ ಇಲ್ಲ. ತಪ್ಪು ಕಲ್ಪನೆ, ಸಂಶಯ ದೂರಮಾಡಬೇಕು ಅಂತ ಅಂದ ಹಾಂಗೆಲ್ಲ ಅದು ಮತ್ತಿಷ್ಟು ಬೆಳಿತಾನ್ವ ನಡದದ್ವ. ನೆಲ ಮನಿಯೊಳಗ ಅವ, ಅಂಬೋದೇನು ? ಒಂದು ವ್ಯಾಳ್ಯ ಇದ್ದರ, ಜಾತ್ರಿ ಆದಮ್ಯಾಲೆ ಯಾಕ, ಈಗ ತೋರಿಸಲಿ. ಜಾತ್ರಿ ಸುರಕ್ಷಿತ ಸಾಗಲಿ. ಪ್ರತಿಪದಾನ್ವ ಅಂಬೋದೇನು ? ಪೂಜಾದಿಗಳನ್ನು ಮಾಡಿ ಬಾಗಿಲು ತಗಿಲಿ ಅಂತ ಅವರ ಪ್ರತಿಪಾದನಾ ಅದ.

ರಾಧಾ—(ಪ್ರವೇಶಿಸಿ) ನಾನೂ ಅದೇ ಅಂತೀನಿ. ನಾಳೆ ನಾಡದರಾಗ ಪೂಜಾಮಾಡಿ ಕಾಯ ಒಡದು ಬಾಗಿಲು ತಗದು ಕಾಗದಪತ್ರ ತಕ್ಕೊಂಡು ಬಗೆಹರಿಸಿ ಬಿಟ್ಟರ ಆತೆಲ್ಲ ? ಯಾಕ ರಾಮಣ್ಣಾ ?

ರಾಮ—ಹೌದಕ್ಕ. ಆದರೂ ನೋಡು ಈ ಲೌಕೀಕ ವ್ಯವಹಾರಗಳು ಆದಷ್ಟು ............

ಕೃ—ಎಂದಿಗೂ ಸಾಧ್ಯ ಇಲ್ಲ. ಅದರಾಗ ದೇವರ ಜಾತ್ರಿ ಮುಂದಿಟು ಗೊಂಡು ಆಗಬಾರದ ಅನಾಹುತ ಆದೀತು.

ರಾಧಾ—ಹಿಂದಕ ಮಾವನೋರ ಕಾಲಕ್ಕ ಹೀಂಗ ನಡನಡುವ ತಗದಿದ್ದಿಲ್ಲೇನು ?

ಕೃ—(ಅಣಕಿಸುತ್ತ) ತಗದಿದ್ದಿಲ್ಲೇನು ? ಇಂಥಾ ಪಂಚೇತಿ ನೆರಸೋದಕ್ಕ, ದೇವರ ದ್ರೋಹ ಮಾಡೋದಕ್ಕ ತಗದಿತ್ತೇನು ? ದೇವರ ಅಲಂಕಾರದ ವಸ್ತ ಒಡವಿ ತಕ್ಕೊಳ್ಳೋದಕ್ಕಂತ ತಗದಿತ್ತು. ಉದ್ದೇಶದ ಕಡೆ ಲಕ್ಷ್ಯ ಇರಬೇಕು.

ವೆಂ—ಅಂತೂ ಪರಿಸ್ಥಿತಿ ಕ್ಲಿಷ್ಟ ಅದ. ಲೌಕಿಕ ವ್ಯವಹಾರ ದೃಷ್ಟಿ ಒಂದು, ದೇವರು, ಧರ್ಮ ಅನ್ನೋ ದೃಷ್ಟಿ ಒಂದು. ಎಲ್ಲಕ್ಕೂ ಹೆಚ್ಚಾಗಿ ಶ್ರೀನಿವಾಸನಂಥ ಒಳ್ಳೇ ಅಳಿಯ ವಿಮುಖನಾಗಬಾರದು ಅನ್ನೋ ದೃಷ್ಟಿ ಒಂದು. ಕೃಷ್ಣರಾಯ ....... .

ಕೃ—ಇವೆಲ್ಲಾ ಒಂದು ಕಡೆಗೆ. ಇನ್ನೊಂದು ಕಡೆಗೆ ಮಾನಮರ್ಯಾದಿ.

ರಾಮು—ಖರೇ ಅದ. ನೀವು ನಂಬರಿ ಬಿಡರಿ. ಮಾನಮರ್ಯಾದಿ ಹೋದ ಮ್ಯಾಲ ಏನು ಇದ್ದರೇನು ಬಿಟ್ಟರೇನು ?

ರಾಧಾ—ನಿನ ಮರ್ಯಾದಿ ಸುಟ್ಟಿತು. (ಆಕ್ರೋಶದಿಂದ) ಮರ್ಯಾದಿ ಮರ್ಯಾದಿ ಅಂತ ಕರುಳು ಕುಯ್ಯೋ ಹಾಂಗ ಮಾಡಿದಿರಿ.

ಕೃ—ನೀನು ಮತ್ತ್ಯಾಕ ಹೊರಗ ಬಂದಿ ?

ರಾಧಾ—(ಅಳುತ್ತ) ಯಾಕ ಬಂದಿ ? ಯಾಕ ಬಂದಿ ? ನನ್ನ ಜೀವ ಮಾನ ಇರೋತನಕ ನಿಮಗ ಅಡ್ಡ ಅಡ್ಡ ಬರತೀನಿ. ಆಮ್ಯಾಲ ಯಾರ ಬರತಾರ ?

ವೆಂ—ರಾಮರಾಮ ? ಯಾಕ ಮನಸಿಗೆ ತ್ರಾಸ ಮಾಡಕೋತೀರಿ. ಆಗೋ ಕಾಲಕ್ಕ ಎಲ್ಲಾ ಆಗತದ. ಅದೆಲ್ಲ ದೇವರ ಆಟ. ನೀವಿಬ್ಬರೂ ಸುಮ್ಮನಿರ್ರಿ.

ರಾಧಾ—ಎಲ್ಲೀತನಕ ಸುಮ್ಮನಿರೋದರೀ. ಮನೀ ಒಳಗಿನವರ ಮಾತಿನ ಕಿಂತ ಹೆರವರ ಮಾತು ಕೇಳಕೋತ ಹೋದರ, ಮನಿ ಮುರಿದು ಮೂರಾಬಟ್ಟೆ ಆಗಿಹೋಗದ ಇನ್ನೇನು ?

ಕೃ—(ಒದರಿ) ಒಳಗ ಹೋಗು ನೀನು. ನನ್ನ ತಲಿ ಕಾಯಿಸಬ್ಯಾಡ. ನಿನ್ನ ಮುದ್ದು ಅಳಿಯ ಮಾತ್ರ ಮನಿಯವರ ಮಾತು ಕೇಳಿ ಬಹಾಳ ಮಾನ ಮರ್ಯಾದಿ ಉಳಸಲಿಕ್ಕೆ ಹತ್ಯಾನ. (ತಲೆ ಜಜ್ಜಿಕೊಳ್ಳುವನು)

ರಾಮು—ರಾಯರ, ರಾಯರ, ಬ್ಯಾಡಿರಿ. ನಾನು ನೋಡಲಾರೆ.

ಕೃ—ರಾಮಣ್ಣ, ಇದು ಮನಿ ಅಲ್ಲೋ ಮಸಣ ಆಗೇದ. ಮನಿ ಮಂದಿ ಅಂತ ಇವರು!

ರಾಧಾ—(ಅಳುತ್ತಲೇ) ಮನಿ ಮಂದಿ ಬಾಯಿಮುಚ್ಚಿ, ಬಟ್ಟೀ ತುರಕಿ, ಬೆನ್ನ ಮ್ಯಾಲ ಬರೀ ಎಳೀತಿದ್ದರ, ಮನಿ ಮಸಣ ಅಲ್ಲದ ಇನ್ನೇನು ಆಗತದ.

ಕೃ—ಅಯ್ಯಯ್ಯೋ! ಇದು ನೋಡಿರಿ ಆಚಾರ. ಇಂಥಾದ್ರೊಳಗ ನೀವು ಸಮಾಧಾನ ತಂದುಕೋಬೇಕು ಅಂತ ಉಪದೇಶ ಮಾಡತೀರಿ.

ವೆಂ—ರಾಧಾಬಾಯಿ, ನೀನು ಒಳಗ ನಡಿಯಮ್ಮ. ನಡಿ, ಸುಮ್ಮಕ್ಕನ ಹತ್ತರ ಹೋಗೋಣ ನಡಿ. ನಡೆಕ್ಕ. (ರಾಧಾಬಾಯಿ ಬಿಕ್ಕುತ್ತ ಒಳಗೆ ಹೋಗುವಳು. ಆಚಾರ್ಯರು ಹಿಂಬಾಲಿಸುವರು.)

ಕೃ—(ಕೈ ಹಿಸುಕಿಕೊಳ್ಳುತ್ತ) ರಾಮಣ್ಣ. ನೋಡಿದಿಲ್ಲೋ. ಒಬ್ಬರಾದರೂ — — ಒಬ್ಬರಾದರೂ — — ಒಬ್ಬರಿಗಾದರೂ ಮಾನ ಮರ್ಯಾದಿ ಕಲ್ಪನಾನೂ ಇಲ್ಲ — ವ್ಯವಹಾರ ಅಂದರ ಗೊತ್ತಿಲ್ಲ.

ರಾಮು—ರಾಯರ, ರಾಯರ, (ಸಮೀಪಕ್ಕೆ ಬಂದು ಪಕ್ಕದಲ್ಲಿ ನಿಂತು ಕೈನೀಡಿ) ನೀವು ಸ್ವಲ್ಪ ವಿಶ್ರಾಂತಿ ತಗೊಳ್ಳಿರಿ. ಮುಂಜಾನಿನಿಂದ ದಣುವ ಆಗೇದ. (ಕನಿಕರದ ದನಿಯಲ್ಲಿ) ನಿಮ್ಮ ಉಪ್ಪು ಉಂಡ ದೇಹ ಇದು. ಇದು ಇರೋತನಕ ನಿಮ್ಮ ಮರ್ಯಾದೀಗೆ ಧಕ್ಕಿ ತರಗೊಡೋದಿಲ್ಲಾಂತ .... .... .... ನೀವು ನಂಬರಿ ಬಿಡರಿ — ನಾನು ನಿಮ್ಮ ನಂಬಿಕಿ ಸೇವಕ. ನಿಮ್ಮ ಪಾದಸಾಕ್ಷಿಯಾಗಿ ಪಣ ತೊಡತೀನಿ.

ಕೃ—ರಾಮರಾಮ! ನೀನೇ ಕಾಯಬೇಕು.

— ತೆರೆ —

## ಪ್ರವೇಶ ೬

[ಜಾತ್ರಿಯ ದಿನ. ಸಾಯಂಕಾಲ ೪-೩೦ ರ ಸಮಯ. ಕೃಷ್ಣರಾಯರ ಮನೆಯ ಹಜಾರದಲ್ಲಿ ಮಂಚದಮೇಲೆ ದಿಂಬಿಗೆ ಒರಗಿಕೊಂಡು ಸುಮಿತ್ರಾ ಕುಳಿತಿದ್ದಾಳೆ. ತಲೆ ಕೆದರಿದೆ. ಮೋರೆ ಒಣಗಿದೆಯಾದರೂ ಉತ್ಸಾಹದ ಕಳೆ ಇದೆ. ಪಕ್ಕದ ಸ್ಟೂಲಿನ ಮೇಲೆ ಇರುವ ಪುಸ್ತಕ ಕಾಪಿಗಳನ್ನು ಒಂದೊಂದಾಗಿ ತೆಗೆದು ಪಾನು ತಿರುವಿ ನೋಡುವಳು. ಅಲ್ಲಲ್ಲಿ ಒಂದೆಡೆಗೆ ಪದಗಳ ಪಲ್ಲವಿ ಮೆಲ್ಲಗೆ ಅರ್ಧರ್ಧಕ್ಕೆ ಅನ್ನುತ್ತ ಮುಂದೆ ನೋಡುತ್ತ ಹೋಗುವಳು.] †

ಸು— ಕೇದಾರಗೌಳ ರಾಗ, ಝುಂಪೆ ತಾಳ

ಕುಲಕುಲ ವೆನ್ನುತಿಹರೋ ॥ ಪ ॥
ಕುಲ ಯಾವುದು ಸತ್ಯಸುಖ ಸಜ್ಜನರಿಗೆ ॥ ಅ ಪ ॥
ಕೆಸರೊಳು ತಾವರೆ ಪುಟ್ಟಲು ಅದ ತಂದು ।
ಬಿಸಜನಾಭನಿಗರ್ಪಿಸಲ್ಲಲ್ಲಿವೇ ॥
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣಲಿಲ್ಲವೇ ॥೧॥

ಮೃಗಗಳ ಮೈಯಲ್ಲಿ ಪುಟ್ಟದ ಕಸ್ತೂರಿ ।
ತೆಗೆದು ಪೂಸುವರು ಭೂಸುರರೆಲ್ಲರೂ ॥
ಬಗೆಯಿಂದ ನಾರಾಯಣನ್ಯಾವ ಕುಲದವನು ।
ಅಗಜೆವಲ್ಲಭನ್ಯಾತರ ಕುಲದವನು ॥೨॥

ಆತ್ಮ ಯಾವ ಕುಲ ಜೀವ ಯಾವ ಕುಲ !
ತತ್ವ ಪಂಚೇಂದ್ರಿಯ ಕುಲವಾವುದು ॥
ಆತ್ಮಾಂತರಾತ್ಮ ನೆಲೆಯಾದಿಕೇಶವ ।
ಆತನೊಲಿದಮ್ಯಾಲೆ ಯಾತರ ಕುಲವೋ ॥೩॥

(ಪುಸ್ತಕ ಕೆಳಗಿಟ್ಟು ದಿಂಬಿಗೆ ಒರಗುವಳು.)

ಧಾ—(ಪ್ರವೇಶಿಸಿ ಸುಮಿತ್ರೆಯ ಹಣೆಗೆ ಕೈಹಚ್ಚಿ) ಮೈ ಬಿಸಿ ಆದಹಾಂಗ ಆಗೇದಲ್ಲ ?

ಸು—ಏನು ಬಿಸಿ ಇಲ್ಲ, ಹಸಿ ಇಲ್ಲ. ಅವ್ವಾ, ಗುಡಿಗೆ ಯಾರ್‍ಯಾರು ಬಂದಾರ ?

ರಾಧಾ—ಎಲ್ಲಾರೂ ಬಂದಾರ.

ಸು—ಎಲ್ಲಾರೂ ಬಂದಾರಂದರೇನು ? ಸುನೀತಾ ಬಂದಾಳ ?

ರಾಧಾ—ಇಲ್ಲ ಬಂದಿಲ್ಲ. ಈಗ ನನ್ನ ಸಂಗಡ ಎರಡನೇ ಪಂಙ್ತಿಗೆ ಕರ ಕೊಂಡು ಹೋಗತೀನಿ.

ಸು—ಅದಕ್ಕಂತ ಬಂದೇನ?

ರಾಧಾ—ಇಲ್ಲವ್ವ. ಈ ಮೂರಾಯ ರಾಮಣ್ಣ ಇನ್ನೂತನಕ ಬರಲಿಲ್ಲ, ಹೊತ್ತು ಮುಣಗಲಿಕ್ಕೆ ಬಂತು. ಎಲ್ಲಾ ನನಸುತ್ತ ಬಿದ್ದದ. ರೂಪಾಯಿ ಬೇಕಾಗೇದ ಅಂತ. ಅದಕ ಕೀಲಿ ಕೈ ಕೊಟ್ಟಾರ ತೆಗೊಂಡು ಬಂದೀನಿ.

ಸು—ಈಗೇನ ರೂಪಾಯಿ?

ರಾಧಾ—ಏನೋ ಬೇಡಿಕೊಂಡಿದ್ದರಂತ. ಊಟಕ್ಕ ಕೂಡೋದಕ್ಕ ಮುಂಚೆ ದೇವರಿಗೆ ಕೊಡತಾರಂತ.

ಸು—ಎಷ್ಟು?

ರಾಧ—ಮುನ್ನೂರಾ ಒಂದು. ಮತ್ತ ಹಾಂಗ ಆ ಜೋಯಿಸರ ಮನ್ಯಾಗ ಮಾಲೀ ಮಾಡಲಿಕ್ಕೆ ಕೊಟ್ಟಾರಂತ. ಉತ್ಸವಮೂರ್ತಿ ದಶಿಂದ ಅದನ್ನೊಂದು ನಾನೇ ಇಸಗೊಂಡು ಹೋಗಬೇಕು. ನಾನದನ್ನ ಇಸಗೊಂಡು ಬರತೀನಿ. ಬರೋದರೊಳಗ ನೀನು ಆ ವ್ಯಾಲ ಅದಲ್ಲ ಆ ಪೆಟಿಗ್ಯಾಗ ರೂಪಾಯಿ ಅವ. ಒಂದು ಮುನ್ನೂರು ರೂಪಾಯಿ ತಗತ ಇಡತೇದ್ಯಾ ಅಕ್ಕ?

ಸು—ಈಗ ಸುಮ್ಮಸುಮ್ಮನೆ ಮುನ್ನೂರು ರೂಪಾಯಿ ಕೊಡೋದು ಯಾಕೋ ಏನೋ?

ರಾಧಾ—ಅಯ್ಯ! ನೀನೆ ತಂದು ಕೊಟ್ಟಾಂಗ ಮಾಡತೀದೆಲ್ಲ? ದೇವರ ದಶಿಂದ ಹಾಂಗ ಅನಬಾರದು.

ಸು—ದೇವರ ದಶಿಂದ. ದೇವರ ದಶಿಂದ. ಯಾಕ ದೇವರನ್ನ ಹರಲಿ ಮಾಡೋದೋ, ಏನೋ?

ರಾಧಾ—ಇರಲಿ ಸುಮ್ಮನಿರವ್ವ ಘಳಸವರು ಅವರು. ಖರ್ಚುಮಾಡವರು ಅವರು. ನಮಗ ಯಾಕ? ನಾಹೋಗಲ್ಯಾ. ತಗದಿಡು ಏನು? (ಏಳುವಳು)

ಸು—ನಾ ಏಳಲಾರೆ ನಮ್ಮವ್ವ ನಿಮ್ಮ. ರೂಪಾಯಿ ಉಸಾಬರಿ ನಮಗ ಯಾಕ ಅಂತ.

ರಾಧಾ—(ಸುಮಿತ್ರೆಯಾಗಲ್ಲ ಹಿಡಿದು) ಅಯ್ಯ? ಸಿಟ್ಟಾದೇನು? ನೀನ ಬ್ಯಾರೆ, ನಾವು ಬ್ಯಾರೆ ಏನ ಹಡದವ್ವ. ಹಾಂಗ ಸಿಟ್ಟಾಗಬಾರದಮ್ಮ. ಇವೊತ್ತ ಸಂಜಿಕೆ ತೇರ ಎಳ್ಯೋಮುಂದ ನಿನ್ನ ಕರಕೊಂಡು ಹೋಗ ತೀನಂತ.

ಸು.—ಈ ರೂಪಾಯಿನ ಬಡವರಿಗಾದರೂ ಕೊಟ್ಟರ, ಇಲ್ಲ ಕನಿಷ್ಠ ಬ್ರಾಹ್ಮ ಣರಿಗೆ ದಕ್ಷಿಣಿ ಅಂತ ಕೊಟ್ಟರ ನೆಟ್ಟಗಾಗಲಿಕ್ಕಿಲ್ಲ?

ರಾಧಾ—ನೀನೂ ಸೀನಪ್ಪನಹಾಂಗ ಅನ್ನಲಿಕ್ಕೆ ಹತ್ತಿದೆಲ್ಲ? ನಮಗ ಹೆಣ ಮಕ್ಕಳಿಗೆ ಇವೆಲ್ಲ ಉಸಾಬರಿ ಯಾಕವ್ವ ಅಂತೀನಿ. ಹೇಳಿದಷ್ಟು ಮಾಡೋಣ.

ಸು—ನೀನು ಸುಮ್ಮನೆ ಇದ್ದಕೋತ ಬಂದದಕ್ಕ ಇಲ್ಲಿಗೆ ಬಂದ್ವದ.

ರಾಧಾ—ಏನಾಗೇದ?

ಸು—ಇನ್ನೇನಾಗಬೇಕು (ಅಳು ದನಿಯಲ್ಲಿ) ಮನಿಗೆ ಬರೋದು ಬಿಟ್ಟು ಮುಂದಿ ಮನ್ಯಾಗ ಇರಬೇಕಾತು.

ರಾಧಾ—(ಮೈಮೇಲೆ ಕೈ ಆಡಿಸಿ) ಹೌದವ್ವ ಏನಮಾಡಬೇಕು ಮತ್ತೆ? ನಾನು ಇವೊತ್ತ ರಾಮು ದೇವರಿಗೆ ಬೇಡಿಕೊಂಡೀನಿ. ನಮ್ಮ ಸೀನಪ್ಪ ಮನಿಗೆ ಬರಲಿ. ಪ್ರಸ್ತ ಮಾಡಿಕೊಳ್ಳಲಿ. ನಿನಗ ಭಂಗಾರದ ನಾಮ ಮಾಡಸ್ತೀನಿ ಅಂತ ಹರಕಿ ಹಾಕೀನಿ.

ಸು—ನೀನೂ ಅದನ್ನ ಬೇಡಿಕೊಂಡೇನು?

ರಾಧಾ—ಯಾಕ?

ಸು—ರಾಮಪೂರದ ಚೆನ್ನನ ಹೊಲಾ ತಿರಗಿ ಕೊಡಸ್ತೀಸಿ ಅಂತ ಬೇಡಿ ಕೊಳ್ಳಲಿಲ್ಲ?

ರಾಧಾ—ಅಯ್ಯ ನಮ್ಮವ್ವ! ನಿಮ್ಮ ಇಬ್ಬರಿಗೂ ಆ ಚೆನ್ನನ ಎಲ್ಲಾರಕಿಂತ ಹೆಚ್ಚಾಗ್ಯಾನ.

ಸು—ಬಡವರ ಗೋಣು ಮುರದು ಮುರದು ಗೋಳು ಕಟಗೊಂಡೇ ನಮುಗ ಕೆಡಕು ತಂದಹಾಂಗ ಆಗೇದ.

ರಾಧಾ—ನೀನು ಕಾಳಜಿ ಮಾಡಬ್ಯಾಡ. ಜಾತ್ರಿ ಆದ ಮ್ಯಾಲ ಅದನ್ನೆಲ್ಲ ಬಗಿಹರಿಸಾಣಂತ, ಆತ್ಯ. ಮತ್ತೆ ನಿನಗ ಆಯಾಸ ಆಗತದನೋ ಏನೋ ನಾನೇ ರೂಪಾಯಿ ತಗದು ಇಟಗೊಂಡು ಹೋಗಲ್ಯಾ ?

ಸು—ಇರಲಿ ಹೋಗವ್ವ ! ನಾನೆಲ್ಲ ತಗದಿಡತೇನಂತ.

ರಾಧಾ—ಇಗಾ ಕೀಲಿ ಕೈಸರಾ ಇಲ್ಲೇ ಅದ ನೋಡು. ಜ್ವಾಕಿ (ಸ್ಟೂಲಿನ ಮೇಲೆ ಕೀಲಿ ಕೈಸರ ಇಡುವಳು. ಮುಂದೆ ಎರಡು ಹೆಜ್ಜೆ ಹೋಗಿ ಏನನ್ನೋ ನೆನಪಿಗೆ ತಂದುಕೊಂಡು ತುಸುಹೊತ್ತು ನಿಂತು) ಸುಮ್ಮಕ್ಕ, ಯಾರರ ಬಂದರ ನಾ ಬರೋತನಕ ಕೂಡು ಅಂತ ಹೇಳು.

ಸು—ಯಾರ್ಯಾರ ಯಾರ ಬರತಾರ !

ರಾಧಾ—ಅಲ್ಲ ಯಾರಾರ ಬಂದರ ಹೇಳೂ ಅಂದೆ. ಕೀಲಿಕೈ ಮಾತ್ರ ಜ್ವಾಕಿ (ಹೋಗುವಳು.)

ಸು—(ಕೀಲಿ ಕೈ ಸರವನ್ನು ತಿರುವುತ್ತಾ ತಿರುವುತ್ತಾ ಶೂನ್ಯದೃಷ್ಟಿಯಿಂದ ನೋಡುತ್ತಿರುವಳು. ಮುಗುಳುನಗೆ ನಕ್ಕು ತನ್ನಷ್ಟಕ್ಕೆ ತಾನೇ) ರೊಕ್ಕ, ಎಲ್ಲಕ್ಕೂ ರೊಕ್ಕಾನೇ ಮುಖ್ಯ ಆಗೇದ.

(ಪದದ ಕಾಪಿಯೊಂದನ್ನು ಆರಿಸಿ ತೆಗೆದುಕೊಂಡು, ಒಂದು ಪದವನ್ನು ಮೆಲ್ಲಗೆ ಹೇಳುವಳು. ಬರುಬರುತ್ತ ಗಟ್ಟಿಯಾಗಿ ಹೇಳುವಳು.)

ಪಂತುರಾವಳಿ ರಾಗ. ಮಟ್ಟೆತಾಳ

ರೊಕ್ಕವೆರಡಕ್ಕೂ ದುಃಖ ಕಾಣಕ್ಕ ||ಪ||
ಮಕ್ಕಳ ಮರಿಗಳ ಮರಿಸೋದೆ ರೊಕ್ಕ
ಸಕ್ಕರೆ ತುಪ್ಪವ ಸವಿಸೋದೆ ರೊಕ್ಕ ||
ಕಕ್ಕುಲಿತೆಯ ಬಹು ಬಡಿಸೋದೆ ರೊಕ್ಕ
ಫಕ್ಕನೆ ಹೋದರೆ ಘಾತಕಾಣಕ್ಕ || ೧
ನೆಂಟರ ಇಷ್ಟರ ಇರಿಸೋದು ರೊಕ್ಕ
ಕಂಟಕಗಳ ಪರಿಹರಿಸೋದು ರೊಕ್ಕ

ಗಂಟುಕಟ್ಟಲಿಕ್ಕೆ ಕಲಿಸೋದು ರೊಕ್ಕ
ತುಂಟತನಗಳನು ಬೆಳಿಸೋದು ರೊಕ್ಕ ॥ ೨ ॥

ಇಲ್ಲದ ಗುಣಗಳ ಬರಿಸೋದು ರೊಕ್ಕ
ಬಲ್ಲಿದನಿವನೆನಿಸೋದು ರೊಕ್ಕ
ಸಲ್ಲದಮಾತನು ನುಡಿಸೋದು ರೊಕ್ಕ
ಇಲ್ಲದಿರಲು ಬಹು ದುಃಖ ಕಾಣಕ್ಕ ॥ ೩ ॥

ಉಂಟಾದ ಗುಣಗಳ ಮೆರಿಸೋದು ರೊಕ್ಕ
ಬಂಟರನೆಲ್ಲರ ಕರಿಸೋದು ರೊಕ್ಕ
ಒಂಟಿ ಕುದುರೆ ಆನೆ ತರಿಸೋದು ರೊಕ್ಕ
ಸೊಂಟಕಟ್ಟಿ ಮುಂದೆ ನಿಲಿಸೋದು ರೊಕ್ಕ ॥ ೪ ॥

( ಶ್ರೀನಿವಾಸನು ಪ್ರವೇಶಿಸುವನು. ಹಾಡುತ್ತಿರುವುದನ್ನು ನೋಡಿ ಮರೆಗೆ ನಿಲ್ಲುವನು. ಸುಮಿತ್ರಾ ಹಾಡುತ್ತಿರುವಳು )

ವಿದ್ಯೆಯ ಮನುಜರ ತರಿಸೋದು ರೊಕ್ಕ
ಹೊಂದಿದ ಜನರನು ಬಿಡಿಸೋದು ರೊಕ್ಕ
ಮುದ್ದು ಪುರಂದರ ವಿಠಲನ ಮರೆಸುವ
ಬಿದ್ದೋಗೋ ರೊಕ್ಕವ ಸುಡು ನೀನಕ್ಕ ॥ ೫ ॥

( ಕಾಪಿಯನ್ನು ಕೆಳಗಿಟ್ಟು, ' ಉಸ್ಸೆಪ್ಪ ' ಎಂದು ದಿಂಬಿಗೆ ಒರಗುವಳು. )

ಶ್ರೀ—( ಮುಂದಕ್ಕೆ ಬಂದು, ಒಳಗಡೆ ನೋಡುತ್ತ ) ಅತ್ತೆಮ್ಮ.

ಸು—( ಎಚ್ಚತ್ತವಳಂತೆ ಎದ್ದು ಕುಳಿತು ) ಅಯ್ಯ ! (ಕೆಳಗೆ ಬದುನಿಂತು) ಆಕಿ ಹೊರಗ ಹೋಗ್ಯಾಳ ಆ ಜೋಯಿಸರ ಮನಿಗೆ. ಬಂದರ ಕೂಡೊಂತ ಹೇಳಿ ಹೋಗ್ಯಾಳ. ( ಎನ್ನುತ್ತ ಪಕ್ಕದಲ್ಲಿದ್ದ ಕುರ್ಸಿಯನ್ನು ಮುಂದಕ್ಕೆ ಸರಿಸುವಳು. ತಾನೂ ಮಂಚದ ಮೇಲುಗಡೆಯಲ್ಲಿ ಬದಿಯಲ್ಲಿ ಮಂಚಕ್ಕೆ ಆನಿಕೊಂಡು ನಿಲ್ಲುವಳು. )

ಶ್ರೀ—( ಕುರ್ಸಿಯ ಹತ್ತರ ಬಂದುನಿಂತು ) ಈಗ ಜ್ವರ ಬರತಾವ ಏನು ದಿನಾ ?

ಸು—( ನಸು ನಾಚಿ, ಮುಖ ಕೆಳಗೆಮಾಡಿ, ಕೈಯಿಂದ ಮಂಚವನ್ನು ತಿಕ್ಕುತ್ತ ಮೆಲ್ಲಕ್ಕೆ ) ಈಗ ಎರಡು ದಿನಾ ಆತು ಬಂದಿಲ್ಲ. ಆದರ ತಲಿಶೂಲಿ ಮಾತ್ರ ಆಗಾಗ ಇರತದ.

ಶ್ರೀ—ಮತ್ತ ತಲೆಶೂಲಿಗೆ ಈ ಹಾಡಿನ ಪುಸ್ತಕ ಕಾಪಿ ಮತ್ತಿಷ್ಟು ಔಷಧ ಇದ್ದಾಂಗ. (ಎಂದು ಸ್ಟೂಲಿನ ಮೇಲಿನ ಪುಸ್ತಕಗಳನ್ನು ಒಂದೊಂದೇ ತೆಗೆದು ನೋಡುವನು. ಹೆಸರು ಗಟ್ಟಿಯಾಗಿ ಹೇಳುವನು) ಶ್ರೀಕೃಷ್ಣ ಪಾರಿಜಾತ, ಹರಿಭಕ್ತಿ ಸುಧೆ, ಚೀಳಿನ ಹಾಡು, ಹರಿಕಥಾಮೃತಸಾರ, ಪುರಂದರದಾಸರ ಕೀರ್ತನೆಗಳು. (ಕಾಪಿಗಳನ್ನು ಕೈಗೆ ತೆಗೆದುಕೊಳ್ಳುವನು. ಕೀಲಿ ಕೈಸರ ಕಣ್ಣಿಗೆ ಬೀಳುವುದು. ಕಾಪಿ ಕೆಳಗಿಟ್ಟು ಅವನ್ನು ಕೈಯಲ್ಲಿ ತೆಗೆದುಕೊಂಡು) ಓಹೋ ಕೀಲಿ ಕೈಸರ!

ಸು—ಅವ್ವ ಇಟ್ಟು ಹೋಗ್ಯಾಳ.

ಶ್ರೀ—ಹೂಂ (ಕೀಲಿ ಕೈಗಳನ್ನು ಒಂದೊಂದೇ ಪರಿಶೀಲಿಸಿ) ನೆಲಮನಿ ತಿಜೋರಿ ಕೀಲಿ ಕೈ ಯಾವುದು?

ಸು—(ಗಾಬರಿಯಾಗಿ) ನೆಲಮನಿ ತಿಜೋರಿ ಕೀಲಿ ಕೈಯು?

ಶ್ರೀ—(ಒಂದು ಕೀಲಿಯನ್ನು ತೋರಿಸುತ್ತ) ಹೌದು. ಇದೇ ಅಲ್ಲ?

ಸು—ಅದರ ಕೆಳಗಿಂದು.

ಶ್ರೀ—ಸರಿ. ನನಗಿಷ್ಟು ದೀಪ ಬೇಕು. ನೆಲಮನೀಗೆ ಹೋಗತೀನಿ.

ಸು—ಇವತ್ತ? ಛೇ ಛೇ!

ಶ್ರೀ—ಹೌದು ಇವತ್ತೇ ಹೋಗಬೇಕಾಗೇದ ನನಗ.

ಸು—ಇವತ್ತ ಪ್ರತಿಪದಾ ಅಲ್ಲ.

ಶ್ರೀ—ಗೊತ್ತದ. ಆದರ ಚನ್ನನ ಹೊಲದ ಕಾಗದಾ ಪತ್ರ ಈಗಲೇ ಬೇಕಾಗೇವ.

ಸು—ಅವು ಅಲ್ಲೆ ಒಳಗ ಅವ ಅಂತ ಯಾರು ಅಂದರು?

ಶ್ರೀ—ಮಾವಯ್ಯ, ರಾಮಣ್ಣ ಇಬ್ಬರೂ ಹೇಳ್ಯಾರ.

ಸು—ಅಂದರ ಇನ್ನ ಸ್ವಲ್ಪ ದಿನಾ ತಡದರ ತಗದು ಕಳಿಸಿಕೊಡತೀನಿ.

ಶ್ರೀ—ಇವೊತ್ತೇ ಬೇಕು. ಇಲ್ಲದೇ ಇದ್ದರ ಘಾತ ಆಗತದ.

ಸು—ಯಾಕೋ ಬ್ಯಾಡ ಅನಸತದ. ಗಾಬರಿ ಆಗತದ.

ಶ್ರೀ—ಸರಿ. (ಮುಂದೆ ಹೋಗುವನು)

ಸು—(ಅಡ್ಡಬಂದು ನಿಂತು ತಡೆದು) ಅಯ್ಯೋ ಬ್ಯಾಡ ಅಂದರ.

ಶ್ರೀ—ಹಾದಿ ಬಿಡು.

ಸು—ಅಯ್ಯೋ! ನಾನ ಹ್ಯಾಂಗ ತಿಳಿಸಲಿ? ನೀವು ಹೋಗೋದು ಬ್ಯಾಡ. ಸಮಾಧಾನದಿಂದ ಕೆಲಸಾ ಆಗಬೇಕು. ನಾನು ನಿಮ್ಮ ಸಂಗಡನs ಇದ್ದೀನಿ.

ಶ್ರೀ—ನನಗ ಬರೇ ಮಾತು ಬೇಕಿಲ್ಲ

ಸು—ಅವ್ವ ಬಂದಳಂದರ?

ಶ್ರೀ—ಯಾರಬಂದರೂ ನನಗ ತಡೆಯಿಲ್ಲ.

ಸು—(ಏನೂ ತೋಚದ-ಹಾಗೆ ಕೊನೆಗೆ) ಅಲ್ಲ! ಚನ್ನಗ ಆಗೋ ಉಪಕಾರ ದೊಳಗ ನನಗೂ ಇಷ್ಟು ಪಾಲು ಬ್ಯಾಡ?

ಶ್ರೀ—ದೀಪ ಹಚ್ಚಿಕೊಟ್ಟರೆ ಸಾಕು.

ಸು—ನಾನೊಂದು ಹೇಳತೀನಿ. ನಾನೇ ಹೋಗಿ ಆ ಕಾಗದ ಕೊಳವಿ ತಗೊಂಡ ಬರತೀನಿ. ನೀವು ಇಲ್ಲೇ ಇರ್ರಿ. ಅವ್ವ ಬಂದರ ತಡದು ನಿಂದರಸವಂತರಿ.

ಶ್ರೀ—ಬ್ಯಾಡ. ನಿನಗ ಮೈಯಾಗ ನೆಟ್ಟಗಿಲ್ಲ.

ಸು—ಸ್ವಲ್ಪ ಕೇಳ್ರಿ. ಕೆಲಸ ಸಾಧಿಸಬೇಕಾಗೇದ. ನೀವು ಒಳಗ ಹೋದ ಮ್ಯಾಲ ಅವ್ವ ಬಂದಳೂ ಅಂದರ ನನಗ ಕೀಲಿಕೈ ಕೇಳತಾಳ. ಸಂಶಯ ಬರತದ. ಮತ್ತ ಗದ್ದಲ ಆಗತದ. ಅದಕ್ಕ.

ಶ್ರೀ—ಆಂ! (ಕೀಲಿ ಕೈಸರ ಕೆಳಗೆ ಬೀಳುವುದು.)

ಸು—ಹೌದು ತರ್ರಿ. (ಎಂದವಳೇ ಕೆಳಗೆ ಬಿದ್ದ ಕೀಲಿ ಕೈ ಸರವನ್ನು ತೆಗೆದು ಕೊಂಡು ಓಡಿಹೋಗುವಳು. ಒಳಗೆ ಚಿಲಕ ಹಾಕಿಕೊಳ್ಳುವಳು.)

ಶ್ರೀ—(ಅವಾಕ್ಕಾಗಿ ನಿಂತು ಬಾಗಿಲ ಬಡಿಯುವನು.) ಅಯ್ಯೋ ಒಳ ಚಿಲಕಾನೇ ಬಿತ್ತಲ್ಲ!

ವೆಂ—(ಪ್ರವೇಶಿಸಿ) ರಾಧಕ್ಕ, ರಾಧಕ್ಕ!

ಶ್ರೀ—(ಬೆಚ್ಚಿಬಿದ್ದು ಹಿಂದಕ್ಕೆ ತಿರುಗಿ) ನಮುಸ್ಕಾರ ಆಚಾರ.

ವೆಂ—ಏನಪ್ಪ ಏನ ಸುದ್ದಿ? ನಮ್ಮ ರಾಧಕ್ಕೆಲ್ಲಿ?

ಶ್ರೀ—ಅತ್ತೆಮ್ಮನ? ಆಕಿ ಎಲ್ಯೋ ಹೊರಗ ಹೋಗ್ಯಾಳಂತ.

ವೆಂ—ಸುಮಿತ್ರಾ?

ಶ್ರೀ—(ಸಂಶಯದಿಂದ ಬಾಗಿಲು ಕಡೆಗೆ ನೋಡುತ್ತ) ಒಳಗ.

ವೆಂ—ಕೂಡಲ್ಲ. (ಇಬ್ಬರೂ ಕುರ್ಚಿಯಮೇಲೆ ಕೂಡುವರು.) ರಾಧಕ್ಕ ಇನ್ನೂ ಬರದೇ ಇದ್ದದ್ದಕ್ಕ ಕೃಷ್ಣರಾಯ ಅಲ್ಲೆ ಗಡಿಬಿಡಿ ನಡಿಸ್ಯಾನ.

ಶ್ರೀ—ಹೂಂ! ಮೊದಲನೇ ಪಂಕ್ತಿ ಆಯತೇನರಿ ?

ವೆಂ—ಆಯಿತಲ್ಲ! ಆದಮ್ಯಾಲ ನಾನು ಮನಿಗೆ ಹೊರಟಿದ್ದೆ. ಹಾದೀಯೊಳಗs ರಾಧಕ್ಕಗ ಹೇಳೀಹೋಗರೀ ಅಂತ ಅಂದನs ಕೃಷ್ಟರಾಯ; ಅದಕ್ಕ ಬಂದೆ. ನೀನು ಎರಡನೆಯ ಪಂಕ್ತೀಗೆ ನಡಿಯಲ್ಲ ಊಟಕ್ಕ.

ಶ್ರೀ—ನೋಡೋಣ.

ವೆಂ—ಇವೊತ್ತು ಸಾಯಂಕಾಲ ರಥೋತ್ಸವಕ್ಕಾದರೂ ಮನಃಪೂರ್ವಕ ಭಕ್ತಿಯಿಂದ ನೀನು ಬರಬೇಕು.

ಶ್ರೀ—ತಮ್ಮ ಆಜ್ಞೆ ಆದಮ್ಯಾಲ ಅದಕ್ಕ ಎದುರಿಲ್ಲ. ಆಚಾರ! ಒಮ್ಮೊಮ್ಮೆ ದೇವರ ಚಮತ್ಕಾರನs ಮಾಡತಾನ.

ವೆಂ—ಹೌದಪ್ಪ! ಆತನ ವ್ಯಾಪಾರಗಳೆಲ್ಲ ಚಮತ್ಕಾರನೇ ನಮಗೆಲ್ಲ. ಆತಗ ಅದು ಸಹಜ ಲೀಲೆ.

ಶ್ರೀ—ಅಲ್ಲ, ನಾವು ಯಾವುದಾದರೂ ಒಂದು ಪದಾರ್ಥವನ್ನು ಅಥವಾ ವ್ಯಕ್ತಿಯನ್ನು ನಮಗಾಗಿ, ನಮ್ಮ ಸ್ವಾರ್ಥಕ್ಕಾಗಿ ಇಟಕೋಬೇಕಂತ ಮನಸ್ಸು ಮಾಡಿ ಅದಕ್ಕ ಪ್ರಯತ್ನಿಸಿದ ಹಾಂಗೆಲ್ಲ ಅದು ನಮ್ಮ ಕೈ ಬಿಡತಾ ಹೋಗತದ. ಅದೇ ನಾವು ಅದರ ಕಡೆಗೆ ಗಮನಿಸದೇ ಸುಮ್ಮನೆ ನಮ್ಮ ಕೆಲಸಾ ಮಾಡಿಕೋತ ನಡದಿದ್ದರ ಆ ಪದಾರ್ಥ ಅಥವಾ ವ್ಯಕ್ತಿ ನಮ್ಮ ಪರವಾಗಿದ್ದು ನಮ್ಮದಾಗಿ ಬಿಡತದಲ್ಲ! ನಾನು ಹೇಳೋದು ಈ ಚಮತ್ಕಾರವನ್ನ.

ವೆಂ—ಹೌದಪ್ಪ ಹೌದು ಹೀಗಾಗೋದುಂಟು. ಹೊತ್ತಾಯಿತು ನಾನು ಹೋಗತೀನಿ. ರಾಧಕ್ಕ ಬರಲಿಲ್ಲ. ಬಂದರ ಇದಿಷ್ಟು ಸುದ್ಧಿ ಹೇಳಿ ಬಿಡು ತೀರಿತು.

ಶ್ರೀ—ಛೇ! ಛೇ! ನಿಲ್ಲರಿ ಈಗ ಬಂದಾಳು.

ವೆಂ—ಮನಿಗೆ ಹೋಗಿ ಸ್ವಲ್ಪ ವಿರಾಮ ತಗೊಂಡು ಮತ್ತೆ ಗುಡೀ ಕಡೆ ಹೋಗಬೇಕಲ್ಲ ?

ಶ್ರೀ—ನನ್ನ ಅಭಿಪ್ರಾಯದಾಗ ಅತ್ತೆಮ್ಮ ಡಾಕ್ಟರ ಮಾವನ ಮನೀಗೆ ಸುನೀತಾನ್ನ ಕರೀಲಿಕ್ಕೆ ಹೋಗಿರಬೇಕು.

ವೆಂ—ಹಾಂ! ನಿನ್ನ ಕೇಳಬೇಕಂತ ಎಷ್ಟ ಸಾರೆ ನೆನಪಾದರೂ ಮರತೇ ಹೋಗತದ. ಆ ಸುನೀತಾಗ ವರ ನಿಶ್ಚೈಸಿದೆಂತಲ್ಲ. ಯಾವ ಊರವರು ?

ಶ್ರೀ—ಇನ್ನೂ ನಿಶ್ಚಯ ಆಗೋದರೊಳಗ ಮುರಿದುಹೋಯಿತು.

ವೆದ—ಮುರದು ಹೋಯತ್ಯ ? ನೀನು ಗಟ್ಟಿಮಾಡಿಕೊಂಡೇ ಇಲ್ಲಿಗೆ ಮುಂದಿನ ವ್ಯವಸ್ಥಾದಶಿಂದ ಬಂದಿದ್ದೀ ಅಂತ ನಾನು ಕೇಳಿದ್ದೆ.

ಶ್ರೀ—ಅದೇ ನಾನಾಗಲೇ ಹೇಳಿದೆನಲ್ಲ! ನಾವು ಮಾಡೋದು ಒಂದು. ಆಗೋದು ಇನ್ನೊಂದು. ನಮ್ಮ ಸಂಕಲ್ಪದಂತೆ ಆಗೋದಿಲ್ಲ.

ವೆಂ—ಆದರ ಯಾಕ ಆ ಸಂಬಂಧ ಮುರಿತೊ ?

ಶ್ರೀ—ನಾನು ಆ ಹುಡುಗನ್ನ ರಾಜಿಮಾಡಿಕೊಂಡು ಬಂದಿದ್ದೆ. ಆದರ ಅವನ ತಂದೀಗೆ ಇವನು ಬರದರ ಅವರು ಒಪ್ಪಲಿಲ್ಲ. ಎರಡು ಸಾವಿರ ವರದಕ್ಷಿಣೆ ಇಲ್ಲದೆ ನಾವು ಒಪ್ಪೋದಿಲ್ಲ. ಇಷ್ಟಕ್ಕೂ ನೀನು ನಮ್ಮ ಮಾತು ಮೀರಿ ಲಗ್ನ ಆದರ ನಾವು ಲಗ್ನಕ್ಕ ಬರೋದಿಲ್ಲ ಅಂತ ಖಂಡುತುಂಡಾಗಿ ಅವಗ ಬರದಾರ.

ವೆಂ—ಅಯ್ಯೋ! ಹೀಗಾಯಿತೆ ? ಎಲ್ಲ ಕಡಿಗೂ ಇದೇ ಭೂತಾನೇ.

ಶ್ರೀ—ಒಟ್ಟು ಆಚಾರ! ಮನುಷ್ಯಗ ರೊಕ್ಕನ್ಯ ಒಂದು ದೊಡ್ಡ ಭೂತ. ಅದರ ದಶಿಂದ ತತ್ವ, ಧರ್ಮ, ಧ್ಯೇಯ ಇವಂತೂ ಇರಲಿ. ನಮ್ಮ ವರು ತಮ್ಮವರು ಅನ್ನೋ ಮುಲಾಜಿ ಸಹಿತ ಹೋಗಿ ಬಿಡತದ.

ವೆಂ—ಮತ್ತೆ ಅದೇ ಮುಖ್ಯ ತಡೆ ಅಲ್ಲ, ಆತ್ಮೋದ್ಧಾರದ ಸಾಧನಕ್ಕ ? ಈ ದ್ರವ್ಯದ ಲೋಭ ಬಹಾಳ ಕೆಟ್ಟದಪ್ಪ. ಈ ಲೋಭ, ಮತ್ತೆ ಅದರಿಂದ ಉಂಟಾಗೋ ಕಾಮಕ್ರೋಧಾನ್ನ ಮನುಷ್ಯ ಹತೋಟಿಗೆ ತಂದಾ ಅಂದರ ಆಯಿತು, ಭವಸಾಗರ ದಾಟಿದ್ಹಾಂಗ.

ರಾಧಾ—(ಪ್ರವೇಶಿಸಿ) ಅಯ್ಯಯ್ಯ. ಬಹಾಳ ಹೊತ್ತಾತೇನು? ನೀವು ಬಂದು?

ಶ್ರೀ—ಅಷ್ಟೇನು ಹೊತ್ತಾಗಿಲ್ಲ.

ವೆಂ—ಏನಕ್ಕ! ಕೃಷ್ಣರಾಯ ಅಲ್ಲೆ ಗಡಬಿಡಿ ನಡಿಸ್ಯಾನ. ತೀವ್ರ ನಡಿ.

ರಾಧಾ—ಹೌದರಿ. ಆ ಜೋಯಿಸರ ಮನಿಗೆ ಹೋಗಿ ಬಂದೆ. (ಬಾಗಿಲು ದಬ್ಬಿ) ಅಯ್ಯ! ಒಳಚಿಲಕ ಹಾಕ್ಕೆಂಡದಲ್ಲ ತಾಯಿ ಈ ಹುಡಿಗಿ. ಸುಮ್ಮಕ್ಕ! ಸುಮ್ಮಕ್ಕ! ಸುಮಿತ್ರಾ, ಸುಮಿತ್ರಾ, ನಾನು ಬಂದೀನಿ ಬಾಗಿಲು ತಗಿಯಮ್ಮ. (ಬಾಗಿಲು ಬಡಿಯುವಳು) ಈ ಮಹಾರಾಯ ರಾಮಣ್ಣ ಇವತ್ತs ಊರು ಬಿಟ್ಟು ಹೋಗಿ ಕೂತಾ. ನನಗ ಫಜೀತಿ ಆಗೇದ.

ವೆಂ—ಅಂದಹಾಂಗ ಎಲ್ಲಿಗೆ ಹೋದಾ ಈತ? ಇಲ್ಲೇ ಹೊಲಕ್ಕ ಹೋಗಿ ಬರತೀನಿ ಅಂತ ನನ ಮುಂದ ಹೇಳಿದಾ ಮುಂಜಾನೆ.

ಶ್ರೀ—ಹೊಲಕ್ಕಂತ ಹೇಳಿದನ? ಯಾವ ಹೊಲಕ್ಕರಿ?

ವೆಂ—ಏನೋ ಅಪ್ಪ ಸರಿಯಾಗಿ ಹೇಳಲೇ ಇಲ್ಲ ಅವನು. ಅವಸರದಿಂದ ಹೋಗೇ ಬಿಟ್ಟ.

ಶ್ರೀ—ಚೆನ್ನ ಇವೊತ್ತು ಬರಬೇಕಾಗಿತ್ತು. ಅವನೂ ಬಂದಿಲ್ಲ.

ವೆಂ—ಹೀಗೇನು? ಏನೂ ತಿಳೀದು. ದೇವರ ಚಿತ್ತ.

(ಬಾಗಿಲು ತೆಗೆಯುವುದು. ಸುಮಿತ್ರಾ ಬಾಗಿಲು ಬಳಿ ಧುಡಂನೆ ಬೀಳುವಳು. 'ಅಯ್ಯೋ' ಎಂದು ಚೀರುವಳು. ಕಾಗದದ ಕೊಳವಿ ಕಳಚಿ ಕೆಳಗೆ ಬೀಳುವುದು. ಉರುಳಿ ಬಂದು ಶ್ರೀನಿವಾಸನ ಕಾಲ ಹತ್ತಿರ ಬಂದು ನಿಲ್ಲುವುದು. ಅವನು ಅದನ್ನು ಗಾಬರಿಯಾಗಿ ತೆಗೆದುಕೊಳ್ಳುವನು. ಸುಮಿತ್ರಾ ತೀರ ನಿರ್ವಿಣ್ಣಳಾಗಿದ್ದಾಳೆ.)

ರಾಧಾ—ಅಯ್ಯ ಸುಮ್ಮಕ್ಕ! ಹೀಂಗ್ಯಾಕ ತಾಯಿ? (ಅವಳ ತಲೆಯೆತ್ತಿ ತನ್ನ ತೊಡೆಯಮೇಲೆ ಹಾಕಿಕೊಳ್ಳುವಳು. ಆಚಾರ್ಯರು ಪಕ್ಕದಲ್ಲಿ ಬಂದು ನಿಲ್ಲುವರು. ಶ್ರೀನಿವಾಸನೂ ಎದುರಿಗೆ ಬಂದು ನಿಲ್ಲುವನು.)

ರಾಧಾ—ಸುಮ್ಮಾ! ಏನಮ್ಮ! ಹೀಂಗ್ಯಾಕ ಮಾಡತೀದಿ? ಏನಾತು?

ಸು—(ಚೀರುವಳು) ಅವ್ವಾ! ಹಾವು ಕಡೀತ ನನಗ. ಇಲ್ಲೆ ಬಲಗಾಲಿಗೆ.

ರಾಧಾ—
ವೆಂ— } —ಹಾವs!

ಸು—ಹಾ....ದು........ನೆಲವು........... (ಮೂರ್ಛೆ ಹೋಗುವಳು. ರಾಧಾ ಬಾಯಿ ಹೌಹಾರಿ ದುಃಖಿಸುವಳು.)

ವೆಂ—(ಶ್ರೀನಿವಾಸನ ಕಡೆಗೆ ನೋಡುವರು. ಅವನು ತಲೆ ಕೆಳಗೆ ಹಾಕುವನು.)

ರಾಧಾ—ಅಯ್ಯೋ! ನನ್ನ ದೈವ. ನಾ ಹ್ಯಾಂಗ ಮಾಡಲಿ? ಅದು ನಾಗರ ಹಾವು. ನನ್ನ ಕೂಸಿನ್ನ ಬದುಕಿಸಿಕೊಳ್ರೆಪ್ಪ. ಚೆನ್ನನ್ನ ಕರೆಸರೋ! ಅವರಿಗೆ ಬಾ ಅಂತ ಕರಿಕಳಸರಿ.

ವೆಂ—ಸಮಾಧಾನವಾಗಿರಮ್ಮ. ನೀನು ಗಡಿಬಿಡಿ ಮಾಡಿದರ ಆ ಹುಡುಗಿ ಇನ್ನಷ್ಟು ಗಾಬರಿ ಆದಾಳು. ನಾನೆಲ್ಲಾರನ್ನ ಕರಸತೀನಿ.

ರಾಧಾ—ನೋಡರಿ ಆಚಾರ! ನೀವು ಇಷ್ಟು ಹ್ಯಾಗರಮಾಡಿ ಉಳಸರಿ. ಈಕಿ ಯಾಕ ನೆಲಮನಿಯೊಳಗ ಹೋಗಬೇಕಾಗಿದ್ದೀತು? ಆ ಬಡ ರಂಡೇಗಂಡಿ ಚನ್ನನ ಉಸರs ಎಲ್ಲಿ ತಟ್ಟಿತೋ ಏನೋ? ಯಾವ ದೇವರಿಗೆ ಎಷ್ಟು ಮಾಡಿದರ ಏನ ಅದ?

ವೆಂ—ರಾಧಕ್ಕ ನೀನು ಘಾಬರಿ ಆಗಬ್ಯಾಡ. ಸೀನಣ್ಣ, ನೀನು ಇಲ್ಲೆ ಇರು. ನಾನು ಡಾಕ್ಟರ ನೀಲಕಂಠರಾಯರನ್ನ ಮೊದಲ ಇಲ್ಲಿಗೆ ಕಳಿಸಿ ಆಮ್ಯಾಲ ಚನ್ನನ್ನ ಬಂದಾನೇನೋ ಕರಸಿಗೋತೀನಿ.

ಶ್ರೀ—(ತಡವರಿಸುತ್ತ) ಆಚಾರ, ನೀವೇ ಇರ್ರಿ. ನಾನೇ ಡಾಕ್ಟರ ಮಾಮನ್ನ ಕಳಿಸಿ ಕೊಡತೀನಿ. ಅಲ್ಲಿಂದ ಸದಾಶಿವಯ್ಯನ್ನ ಕರಕೊಂಡು ಚನ್ನನ್ನ ಕರಿಸಿಗೋತೀನಿ. (ಕಾಗದ ಕೊಳವಿಯನ್ನು ಮೇಜಿನಮೇಲೆ ಒಗೆದು ಹೋಗುವನು.)

ವೆಂ—ಆಗಲಿ ಹೋಗು. (ಶ್ರೀನಿವಾಸನು ಹೊರಗೆ ಹೋಗುವನು.)

— ತೆರೆ —

## ೭ನೆಯ ಪ್ರವೇಶ

( ಊರ ಬೀದಿ. ಕೃಷ್ಣರಾಯ ಮಡಿ ಉಟ್ಟು ಕೈಯಲ್ಲಿ ಬೆಳ್ಳಿ ಚಾಂಬನ್ನು ಹಿಡಿದು ವೇಗವಾಗಿ ಹೊರಟಿರುವನು. ಹಿಂದಿನಿಂದ 'ಎಪ್ಪಾ ! ನನ್ನೊಡ್ಯಾ ! ಒಂತುಸಾ ನಿಂದಿರು' ಎನ್ನುವ ಕೂಗು ಕೃಷ್ಟರಾಯರು ಮಧ್ಯ ರಂಗಕ್ಕೆ ಬಂದು ನಿಲ್ಲುವರು. ಹಿಂತಿರುಗಿ ನೋಡುವಷ್ಟರಲ್ಲಿ ಚೆನ್ನಪ್ಪನು ಬಂದು ಅವರ ಮುಂದೆ ಬಿದ್ದು ಅಳುತ್ತ ಬಿದ್ದಲ್ಲಿಯೇ )

ಚೆ—ಎಪ್ಪಾ ನನ್ನ ಕಳ್ಳು ಕೊರೀ ಬ್ಯಾಡ. ರಾಮಣ್ಣಾ ಮಾಡದೆಲ್ಲ ಮಾಡಿ ಬಿಟ್ಟನೆಪ್ಪ. (ಎದ್ದು ನಿಂತು) ನನ್ನ ಉಡುಗ ರಾಮುಗ ಸಾಯಂಗ ಏಟು ಬಿದ್ದವ್ಲ ಎಪ್ಪ! ಈ ಊರ ದವಾಕಾನಿಗೆ ತಂದಾರ. ಏನಾ ಗ್ತೈತೋ ಏನೊ? ಸಣ್ಣವನ್ನ ಅಮೀನ ಕಚೇರಿಗೆ ಒಯ್ದಾರ. ಎಪ್ಪಾ ಅವನ್ನಾರ ಈಟು ಉಳಿಸಿಗೋ! ರಾಮಣ್ಣಾ ಇನ್ನ ಅಲ್ಲೇ ಕುಂತಾನ.

ಕೃ—ಆತ್ಯಿ! ಸೊಕ್ಕು ಮುರೀತ ಈಗಾರ ನಿಂದು. ನಾನು ಒಳ್ಳೇ ಮಾತಿಲೆ ಹೇಳಿದರ ಎಲ್ಲಿ ಕೇಳಿದಿ? ಕಡೀಗ ಆತಿಲ್ಲೋ ಹಣೇಬಾರ. ಬ್ಯಾಡೋ! ಆ ತಿಮ್ಮನ ಸಂಗಡ ಬಡದಾಡಬ್ಯಾಡ ಅಂತ ಗಿಳಿಗೆ ಹೇಳಿದ್ಹಂಗ ಹೇಳಿದೆ. ನಾ ಏನು ಮಾಡಲೆಪ್ಪ ಈಗ? ಉಣ್ಣು ಫಲ ಭೋಗಾನ.

ಚೆ—(ದೈನ್ಯದಿಂದ) ಔದು ಎಪ್ಪ! ನೀ ಏಳಿದ್ದಿ. ಆದರ ದೈವ ಕೊಟ್ಟ ಐತಿ. ಏನು ಮಾಡೋದು? ನೀನಿಷ್ಟು ಅಂತಕ್ಕಣ್ಣಾ ಮಾಡು.

ಕೃ—ಈಗ ನಾನು ಮಡೀಲಿ ಇದ್ದೀನಿ. ನಂದು ಇನ್ನ ಊಟ ಸೈತ ಆಗಿಲ್ಲ. ನಾಳೆ ನೋಡಾಣಂತ. (ಹೊರಡಲನುವಾಗುವನು.)

ಚೆ—ಒಂದು ಚೀಟ್ಯಾನ ಬರಕೊಡು ಅಮೀನಗ. ಮನೀಗೆ ಬರತೀನಿ.

ಕೃ—ಮಡೀಲೆ ಇದ್ದೀನಿ. ನಾಳೆ ನೋಡೋಣ.

ಸದಾ— (ಪ್ರವೇಶಿಸಿ) ಏನು ಚನ್ನಪ್ಪ ಇದು. ( ಕೃಷ್ಟರಾಯರು ಹೋಗಿ ಬಿಡುವರು. )

ಚೆ—ಇದು ನನ್ನ ಕೊಟ್ಟ ದೈವ ಎಪ್ಪ!

ಸದಾ—ಏನು ಏನು ? ಏನು ಸುದ್ದಿ ? ಯಾಕ ಇಷ್ಟು ಹೌಹಾರೀದಿ ?

ಚೆ—ರಾಮಣ್ಣಾ ಇವತ್ತ ಮುಂಜಾನೇ ಬಂದು ಆ ತಿಮ್ಮಪ್ಪನ ಕಡಿಂದ ನಮ್ಮೊಲಕ್ಕ ಕುಂಟಿ ಕಟ್ಟಿಸಿದನಂತ. ನಮ್ಮ ಉಡುಗರು ಸುದ್ದಿ ಕೇಳಿ ಓಗ್ಯಾವ. ಒಡಿಪೆಟ್ಟು ಆಯಿತು. ನಾನು ತೊಪ್ಪಲಾ ತರಾಕ ಅಂತ ಓದಾವ ಆದ ಬಂದಗಳಿಗ್ಗೆ ಸುದ್ದಿ ಕೇಳಿ ಒಲಕ್ಕ ವಾದೆ. ಓಗವರಾಗ ನನ್ನ ಇರೇ ಉಡಗ ಎಚ್ಚರ ತಪ್ಪಿ ಬಿದ್ದಿದ್ದ. ತಿಮ್ಮನ ಆಳ ಮಗನ ತೆಲಿ ಒಡದು ರಕ್ತ ಪುಟಿತಿತ್ತು. ಪಂಚನಾಮಾ ಮಾಡಿ ಇಬ್ಬರನ್ನ ಇಲ್ಲೇ ದವಾಕಾನಿಗೆ ತಗಂಡ ಬಂದಾರ. ನನ್ನ ಸಣ್ಣ ಉಡಗನ್ನ ಅಮೀನ ಕಚೇರಿಗೆ ಒಯ್ದ್ಯಾರ ಎಪ್ಪ.

ಸದಾ—ಅಯ್ಯೋ ! ನಡೀ ಅಮೀನ ಕಚೇರಿಗೆ ಹೋಗಾಣ. ಶ್ರೀನಿವಾಸ ರಾಯರು, ಡಾ. ನೀಲಕಂಠರಾಯರ ಹತ್ತಿರ ಇರಬಹುದು. (ಇಬ್ಬರೂ ಬಂದ ದಾರಿಯಿಂದ ತಿರುಗಿ ಹೊರಡಲನುವಾದರು. ಶ್ರೀನಿವಾಸ ರಾಯನು ಓಡುತ್ತ ಬರುವನು.)

ಶ್ರೀ—(ತೇಕುತ್ತ) ಚೆನ್ನಪ್ಪ. ನಡೆಪ್ಪ. ಹಾವು ಕಡದ್ವದ ಜೀವಉಳಿಸು.

ಚೆ—ಯಾರಿಗೇ ಎಪ್ಪ ?

ಸ—ಯಾರಿಗಿರಿ ?

ಶ್ರೀ—ಆಕೀಗೆ. ನೆಲಮನಿಯೊಳಗ, ನಾಗರಹಾವು. ತೀವ್ರ ನಡೀರಿ.

ಸದಾ—ಅಲ್ಲ. ಸರಿ. ಹೋಗೋಣ. ಆದರ ಈ ಚೆನ್ನಪ್ಪ........

ಚೆ—(ಆವೇಶದಿಂದ) ಮಾಸ್ತರ್‍ರ ಇದು ಒತ್ತಲ್ಲ ತಡದು ನಿಂದರೋದು. ನಡೀರಿ.

ಸದಾ—ಆಗಲಿ. ನಡೀರಿ. (ಹೋಗುವರು)

— ತೆರೆ —

## ಪ್ರವೇಶ ೮

(ಕೃಷ್ಣರಾಯರ ಮನೆಯ ಪಡಸಾಲೆ. ವೆಂಕಪ್ಪಚಾರ್ಯರು ಕುರ್ಚಿಯ ಮೇಲೆ ಕುಳಿತು ಕಾಗದದ ಕೊಳವೆಯೊಳಗಿನ ಕಾಗದಗಳನ್ನು ತೆಗೆದು ನೋಡುತ್ತಿದ್ದಾರೆ. ಒಳಗಿನಿಂದ ಡಾಕ್ಟರ ನೀಲಕಂಠರಾಯರು ಬರುವರು.)

ವೆಂ—(ಅತ್ತನೋಡಿ) ಯಾಕ ನೀಲಕಂಠರಾಯ, ಹ್ಯಾಂಗ ಅದ ?

ನೀ— ಹ್ಯಾಂಗ ಏನು ? ನಾಗರ ಹಾವಿನ ವಿಷ. ಮೈಮೇಲೆ ಸ್ಮೃತಿ ಅಂತು ತಪ್ಪೇದ. ಮೈಯೆಲ್ಲ ವಿಷ ವ್ಯಾಪಿಸೇದ ಹೃದಯ ಇನ್ನೂ ಸರಿಯಾಗೇ ಅದ. ಒಂದು ಇಂಜೆಕ್ಷನ್ ಕೊಟ್ಟೇನಿ. ಕಡದ ಜಾಗಕ್ಕ ಒಂದು ಔಷಧ ಹಚ್ಚಿದ್ದಲ್ಲದ ಮೂಗಿನೊಳಗೂ ಒಂದು ಔಷಧ ಹಾಕೇನಿ. ದೈವ ಪರೀಕ್ಷೆ !

ವೆಂ—ಸರಿಸರಿ. ರಾಧಕ್ಕಗ ಧೈರ್ಯ ಹೇಳಿದಿಲ್ಲೋ ? ಚೆನ್ನ ಈಗ ಬರ ಬಹುದು.

ನೀಲ—ಓಹೋ ! ಅದರ ಕಾಳಜಿ ಬಿಡರಿ. ಧೈರ್ಯ ಹೇಳೇನಿ. ನಿಮ್ಮ ಕೈಯಾಗಿಂದು ಏನು ?

ವೆಂ— ಇದರ ಕಾಲಾಗs ಅಲ್ಲೇನಪ್ಪ ! ಸುಮಿತ್ರಾ ನೆಲಮನೀ ಒಳಗ ಹೋಗಿ ಹಾವು ಕಡಿಸಿಕೊಂಡಿದ್ದು.

ನೀಲ—ಹಾಂ ಹಾಂ ! ಇದರೊಳಗ ಚೆನ್ನಪ್ಪನ ಹೊಲದ ಕಾಗದ ಪತ್ರ ಅವs ಏನು ?

ವೆಂ—ಅದಲ್ಲ ! ಸುಮಿತ್ರಾನ ಹೆಸರಲೇನ ಹೊಲಾ ಖರೀದಿ ಆಗೇದ.

ನೀಲ—ಓಹೋ ! ಹಾಗಾದರ ಚೆನ್ನಗ ಹೊಲಾ ತಿರಗಿ ಸಿಗತದ.

ವೆಂ— ಹಾಂ ! ಅದು ಆಗತದ ಅನ್ನು. (ಕಾಗದದ ಕೊಳವಿಯನ್ನು ತೆಗೆದು ಮಂಚದ ಮೇಲೆ ಹಾಸಿಗೆಯ ಬುಡದಲ್ಲಿಡುತ್ತ) ಅಂತೂ ಇದೊಂದು ದೊಡ್ಡ ಗಂಡಾಂತರ ಕೃಷ್ಣರಾಯಗ.

ಕೃ—(ಪ್ರವೇಶಿಸಿ) ಮತ್ತೇನು ಗಂಡಾಂತರ ? ನೀವೂ ಬಂದು ಇಲ್ಲೇ ಕೂತ ಬಿಟ್ಟರೆಲ್ಲ ? ಒಬ್ಬರಿಗೂ ಕಾಳಜೀ ಇಲ್ಲ. ನೀಲಕಂಠರಾಯ ಯಾಕ ಬಂದಾನ ?

ವೆಂ—ಸುಮ್ಮಕ್ಕಗ ಹಾವು ಕಡದ್ದsದ.

ಕೃ—ಹಾವ ?! ಅಯ್ಯೋ ರಾಮ ರಾಮ. ಎಲ್ಲಿ ಹಾಳ ? (ಎಂದವನೇ ಒಳಗೆ ಹೋಗುವನು. ವೆಂಕಪ್ಪಾಚಾರ್ಯರು ಒಳಗೆ ಹೋಗುವರು. ಶ್ರೀನಿವಾಸ, ಸದಾ ಶಿವಯ್ಯ ಪ್ರವೇಶಿಸುವರು.)

ಸದಾ—ಯಾಕರೀ ಡಾಕ್ಟರ, ಹ್ಯಾಂಗ ಅದs ಈಗ ?

ನೀಲ—ನಾ ಮಾಡೋ ಪ್ರಯತ್ನ ಮಾಡೀನಿ.

ಶ್ರೀ—ಚೆನ್ನನ ಹೊರತು ಬಗೀಹರೋದಿಲ್ಲ.

ನೀಲ—ಕೃಷ್ಣರಾಯ ಬಂದಾನ. ಆತ ಏನಂತಾನ ಕೇಳೋಣ.

ಶ್ರೀ—ಆದರ ಚೆನ್ನ ಹೊರಗ ಬಂದು ನಿಂತಾನ.

ಸದಾ—ಅದು ಸರಿ. ಆದರ ವೆಂಕಪ್ಪಾಚಾರ್ಯರು ಒಳಗೆ ಇದ್ದಾರ, ಕಾಣ ಸತ್ವದ (ಬಾಗಿಲ ಹತ್ತಿರ ಹೋಗಿ) ಆಚಾರ! ಸ್ವಲ್ಪ ಇಲ್ಲೆ ಬರ್‍ರಿ.

ವೆಂ—(ಪ್ರವೇಶಿಸಿ) ಚೆನ್ನಪ್ಪನ ಪತ್ತೆ ಆಯಿತೇ ?

ಶ್ರೀ—ಬಂದು ಹೊರಗ ನಿಂತಾನ.

ಕೃ—(ಪ್ರವೇಶಿಸಿ, ದುಃಖಿತನಾಗಿ) ರಾಮರಾಮ! ಎಂತಹ ಪ್ರಸಂಗ ತಂದೆಪ್ಪ! ನನ್ನ ವೈರಿಗೂ ಬರಬಾರದು ಇಂಥ ಪ್ರಸಂಗ! ಆಚಾರ!

ವೆಂ—ಈಗ ಸಮಾಧಾನವಾಗಿರು. ನೀನು ಯಜಮಾನ ಕೂತುಕೊಂಡು ಗಾಬರಿ ಆದರ ಹ್ಯಾಗ ? ನೀನು ಸ್ವಲ್ಪ ಇಲ್ಲೆ ಕುರ್ಸಿ ಮ್ಯಾಲ ಕೂಡು. ಬೆಳಗಿನಿಂದ ಉಪವಾಸ ಬೇರೆ. ಸಾಕಷ್ಟ ದಣಿವಾಗೇದ ಇವತ್ತ ನಿನಗ. (ಆತನನ್ನು ಕೈಹಿಡಿದು ಕರೆದುಕೊಂಡು ಹೋಗಿ ಕುರ್ಸಿಯ ಮೇಲೆ ಕೂಡಿಸುವರು) ಹಾಂ! ಚನ್ನಪ್ಪ ಬಂದಾನ ಮಾಸ್ತರ ? ಸುಮ್ಮಕ್ಕನ ಹೊರಗ ಕರ ಕೊಂಡು ಹೋಗೋಣ, ಹ್ಯಾಂಗಪ್ಪ ನೀಲಕಂಠರಾಯ ?

ನೀಲ—ಗಾಳಿ ಬಹಳ, ಅಲ್ಲದೇ ಆಕಿನ್ನ ಈಗ ಅಲುಗಾಡಿಸಬಾರದು. ಚನ್ನಪ್ಪನ ಇಲ್ಲೇ ಕರಸರಿ ಒಳಗ.

ವೆಂ—ಆಂ! ಒಳಗ ?

ಸದಾ—ಹೌದ್ಹ್ಯಾದು. ಚನ್ನಪ್ಪಾ ಬಾ.

(ಚನ್ನಪ್ಪ ಪ್ರವೇಶಿಸುವನು. ಅಂಜುತ್ತ ಒಂದು ಬದಿಗೆ ನಿಲ್ಲುವನು).

ವೆಂ—ಏನು ಚೆನ್ನಪ್ಪ, ನಿನ ಕಡಿಂದ ಇವತ್ತ ದೊಡ್ಡ ಕೆಲಸಾ ಆಗಬೇಕಾಗೇದ.

ಚೆ—ಎಪ್ಪಾ! ದೇವರು ದೊಡ್ಡಾವ ಅದಾನ. ಒಂದು ಚರಿಗಿ ನೀರು ತರಬೇಕಲ್ಲ. ಮಾತಾಡಲಾರದ್ದ ?

ಸದಾ—ನಾನು ತರತೀನಿ, ನೆರಮನಿ ವಾಸಣ್ಣನ ಬಾವಿಯಿಂದ (ಹೋಗುವನು)

ವೆಂ—ಮತ್ತೇನು ಬೇಕು?

ಚೆ—ಮತ್ತೇನಿಲ್ಲಪ್ಪ ನೀರು ಮಂತ್ರಿಸಿ ಕೊಡತೀನಿ. ಅವ್ವನ ತಲಿಮ್ಯಾಗ ಆಕಿಬಿಡರಿ. ಅಲ್ಲಿಂದ ಒಂತುಸಾ ನೀರು ತಗೊಂಡು ಕಡದ ಜಾಗಕ್ಕ ಆಕಿದರಾತ್ಯು. ಅಲ್ಲಿಂದ ನಾನು ಓಗಿ ತೊಪ್ಪಲ ತಂದು ಕೊಡತೀನಿ. ಮೂಗಿನಾಗ ಇಂಡಬೇಕು.

ಕೃ—ಆಚಾರ, ದೇವರು ನಮುಗ ಇಂಥ ಪ್ರಸಂಗ ಯಾಕ ತರತಾನ?

ವೆಂ—ಆಗಲಿ ಆಗಲಿ, ಆತನ ಸಂಕಲ್ಪ ಅದು.

ಕೃ—ಈಕಿಗೆ ಹಾವು ಎಲ್ಲಿಂದ ಬಂದು ಕಡೀತು?

ವೆಂ—ಬಂತು ಎಲ್ಲಿಂದಲೋ! ಪರೀಕ್ಷಿತರಾಯುಗ ಒಂದು ಹಣ್ಣಿನೊಳಗಿಂದ ಬರಲಿಲ್ಲ? ಅದು ಏನು? ದೇವರ ಇಚ್ಛಾಕ್ಕ ಬಂದವ್ಯಾಲೆ.

ಕೃ—ಅಲ್ಲಾ ಮೊದಲೇ ಜ್ವರದ ಹುಡುಗಿ. ಅದರಾಗ ಹಾವು ಕಡೀಬೇಕಂದರ.

ವೆಂ—ಸುಜೀವಿಗಳಿಗೆ ಯಾವಗಲೂ ಹೀಗೆಯೇ! ಪರೀಕ್ಷಾ ಮಾಡತಾನ ಪರಮಾತ್ಮ.

ಸೀಲ—ಆದರೂ ನೆಲಮನಿ ಒಳಗ ಹೋಗಬಾರದಾಗಿತ್ತು.

ಕೃ—ನೆಲಮನಿ ಒಳಗ?

ವೆಂ—ಏನಾದರೊಂದು ನೆವ ಬೇಕಲ್ಲ ದೇವರಿಗೆ? ತನಮ್ಯಾಲ ಯಾವುದೂ ಹಾಕಿಕೊಳ್ಳೋದಿಲ್ಲ.

ಕೃ—ರಾಮರಾಮ! ನೆಲಮನೀಗೆ ಆಕೀನೇ ಹೋಗಬೇಕಾತ್ಯ. ಚೆನ್ನ, ಸುಮಿತ್ರಾ ನಿನದತಿಂದ ಹಾವು ಕಡಿಸಿಕೊಂಡಾಳ. ನಿನಕೈಯಿಂದ ಆಕೀನ ಉಳಿಸಿಕೋ.

ಚೆ—ಯಾರ ಕೈಯಾಗೇನೈತಿ? ದೇವರು ದೊಡ್ಡಾವ ಅದಾನೆಪ್ಪ. (ಸದಾಶಿವಯ್ಯನು ನೀರಿನ ತಂಬಿಗೆಯನ್ನು ತರುವನು.) ಮಾಸ್ತರ! ನೀವು ಅಂಗೇ ಕೈಯಾಗ ಇಡಕೊಂಡು ನಿಂತಿರ್ರಿ. ಮಂತ್ರಸತೀನಿ. (ಮಾಸ್ತರು ತಂಬಿಗೆ ಹಿಡಿದುಕೊಂಡು ನಿಲ್ಲುವರು. ಚೆನ್ನಪ್ಪನು ಮಂತ್ರಿಸುವುದಕ್ಕಾಗಿ ತಲೆಯ ಮೇಲಿನ ಒಲ್ಲಿ ತೆಗೆದು ಕೆಳಗಿಟ್ಟು ಸಿದ್ಧನಾಗಿ ನಿಲ್ಲುವನು.)

ರಾಮು—(ಪ್ರವೇಶಿಸಿ ಗಡಿಬಿಡಿಯಿಂದ) ರಾಯರ್‍ದ ಹೊಲದ ಕಬ್ಜಾ ಸಿಕ್ಕಿತು. ಈ ಮಂದೀದೆಲ್ಲ ಸೊಕ್ಕು ಮುರೀತು. ಅವಾ ಚೆನ್ನನ ಹಿರೇಮಗಾ ದವಾಖಾನ್ಯಾಗ ತೀರಿಕೊಂಡ. (ಎಲ್ಲರೂ ಉದ್ಗಾರ ತೆಗೆಯುವರು)

ಸದಾ—ಅಯ್ಯೋ ರಾಮರಾಮ, ಬಡವರಿಗೆ ದೇವರು ಎಷ್ಟ ಕಷ್ಟ ಕೊಡತಾನ.

ವೆಂ—ಶ್ರೀಹರಿ ಇದೇನಾಯಿತು!

ಚೆನ್ನ—ಇನ್ನ ಸ್ವಲ್ಪ ತಡದು ಬರಬಾರದಾಗಿತ್ತ ರಾಮಣ್ಣ?

ರಾಮು—ಇನ್ಯಾಕ ತಡೆಯೋದು? ಕಬ್ಜಾ ತಗೊಂಡಮ್ಯಾಲ.

ಕೃ—ರಾಮಣ್ಣ! ಬಾಯಿಮುಚ್ಚಿಕೊಂಡು ಹೊರಗ ಹೋಗು ಅನಕಾ.

ರಾಮು—(ನಿರ್ವಿಣ್ಣನಾಗಿ ಏನು ತಿಳಿಯದೆ) ಅಯ್ಯ, ಯಾಕರಿ?

ವೆಂ—ಚನ್ನಪ್ಪ!

ಚೆ—(ಗದ್ಗದಿತನಾಗಿ) ಎಪ್ಪಾ! ಸೂತಕದಾಗ ಮಂತ್ರಾ ಬರಾಕಿಲ್ಲ.

ಶ್ರೀ—(ಸ್ವಗತ) ರಾಮ, ನಾರಾಯಣ, ಇದೇನಾಯಿತು? ಈ ದೇವರ ಹೊಲಾ ಇಲ್ಲ್ಯಾ ಕಚ್ಚಿತು. ಅಲ್ಲಿ ಚನ್ನಪ್ಪನ ಮಗನಿಗೂ ಕಚ್ಚಿತು. ಅಯ್ಯೋ ದೇವರ ಹೊಲವೆ! (ಮೆಲ್ಲಗೆ ಹೋಗುವನು.)

ಕೃ—ಇದು ದೇವರ ದ್ರೋಹ! ನಮ್ಮ ದುರ್ದೈವ.

ವೆಂ—ಚೆನ್ನಪ್ಪ! ನಿನ ಕೆಲಸಾ ನೀನು ಮಾಡಿಬಿಡು. ಮುಂದಿನದು ದೇವರ ಕೈಯಾಗಿನದು.

ಚೆ—ಆದರ ನಾನೇ ನಷ್ಟ ಆಗತೀನಿ. (ಮೆಲುದನಿಯಲ್ಲಿ) ಸೀನಣ್ಣ ಹ್ವಾದ ನಲ್ಲ! (ತುಸು ತಡೆದು) ಆಗಲಿ. ಆದದ್ದ ಆಗಲಿ ಆಚಾರೇರ. ಮಂತ್ರ ಆಕತೀನಿ. (ನೀರನ್ನು ಮೂರು ಸಲ ಮಂತ್ರಿಸಿ, ಕೆಳಗಿಟ್ಟು ಬಿಲ್ಲಿಯನ್ನು ತೆಗೆದು ಕೊಳ್ಳದೇ, ಒಂದೊಂದೇ ಹೆಜ್ಜೆ ಹಾಕುತ್ತ ಹೋಗುವನು. ಸದಾಶಿವಯ್ಯ ನೀರು ತೆಗೆದುಕೊಂಡು ಒಳಗೆ ಹೋಗುವನು.)

(ಕೃಷ್ಣರಾಯ ತಲೆಗೆ ಕೈಹಚ್ಚಿಕೊಂಡು ಕುಳಿತಿದ್ದಾನೆ. ರಾಮಣ್ಣ ಅವನ ಮುಖ ನೋಡುತ್ತಿದ್ದಾನೆ. ನೀಲಕಂಠರಾಯ ಶೂನ್ಯದೃಷ್ಟಿಯಿಂದ ಏನನ್ನೋ ನೋಡುತ್ತಿದ್ದಾನೆ. ಆಚಾರ್ಯರು ಅವಾಕ್ಕಾಗಿ ನಿಂತಿದ್ದಾರೆ.)

ವೆಂ—(ಸ್ವಗತ) ದೇವರ ಹೊಲಾ! ದೇವರಿಗೆ ಹೊಲಾ! ಹೋ ಹೂ (ನಿಟ್ಟುಸಿರು) ಸುಮಿತ್ರಾಬಾಯಿ! ಎಂಥ ಮುತ್ತಿನಂಥಾ ಮಾತು ಕೇಳಿದಿ! (ಎಚ್ಚತ್ತವರಂತೆ) ಚೆನ್ನಪ್ಪ ಹೋದನ?

(ಅದೇ ಸಮಯಕ್ಕೆ ಒಳಕ್ಕೆ 'ಸುಮಿತ್ರಾ ಕೈಬಿಟ್ಟಳರೆಪ್ಪೊ' ಎಂಬ ರೋದನ ಕೇಳ ತ್ತಿರುವಾಗ ತೆರೆ ಕೆಳಗಿಳಿಯುವುದು.)



# ವೃದ್ಧಾಪ್ಯ.



ಹಗಲೆಲ್ಲ ದುಡಿದು ದಣಿದಮೇಲೆ ಮುಂಬರುವ ವೃದ್ಧಾಪ್ಯವನ್ನು ನೆನೆದರೆ, ಆಯಾಸ ಇನ್ನೂ ಹೆಚ್ಚುತ್ತದೆ. ಮುಂಬರುವ ಆ ಕಷ್ಟದ ಕಾಲವನ್ನು ಸುಖಮಯವನ್ನಾಗಿ ಮಾಡಬೇಕೆಂದಿದ್ದರೆ, ನಮ್ಮಿಂದ ವಿವರಗಳನ್ನು ಪಡೆಯಿರಿ.

